# ಯಾವ ಮತದಲ್ಲಿ ಎಷ್ಟು ಮತದ್ವೇಷ




ಗ್ರಂಥಕರ್ತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**



www.thraithashakam.org







# ಯಾವ ಮತದಲ್ಲಿ ಎಷ್ಟು ಮತದ್ವೇಷ?


ಗ್ರಂಥಕರ್ತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಅಕ್ಟೋಬರ್–2016

ಪ್ರತಿಗಳು : 1000 **ಬೆಲೆ. 80/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು-ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು-ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು-ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ



04
# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಿಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಲಕ್ಷ್ಮಿನಾರಾಯಣಾಚಾರಿ**–09440556968. **ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್**.B
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾ ನಗರ, ತೊಣಚಿಕೊಪ್ಪಲ್,
ಮೈಸೂರ್–547097
Cell : 9141109799, 9986369118

**T.V. ರಮಣ**
ಓಉಖ ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಯಾವ ಮತದಲ್ಲಿ ಎಷ್ಟು ಮತದ್ವೇಷ? 09

ಮನುಷ್ಯನಿಗೆ ಹುಟ್ಟಿನಿಂದಲೇ ಸಂಕ್ರಮಿಸುವವು ಗುಣಗಳು. ಮನುಷ್ಯ ಹುಟ್ಟಿದ ಮೊದಲಿನಿಂದಲೂ ಆತನೊಂದಿಗೆ ಬೆರೆತು ಯಾವ ಗುಣಗಳಿವೆಯೋ, ಅವೇ ಗುಣಗಳು ಮನುಷ್ಯ ಸತ್ತುಹೋದಾಗ ಸಹ ಆತನನ್ನು ಬಿಡದೆ ಆತನೊಂದಿಗೆಯೇ ಬೆರೆತಿದ್ದು, ಹುಟ್ಟಿನಿಂದಲೂ ಸಹ ಆತನೊಂದಿಗೆಯೇ ಇದ್ದು ನಂತರ ಜೀವನವೆಲ್ಲಾ ಅದೇ ಮನುಷ್ಯನೊಂದಿಗೇ ಇರುತ್ತವೆ. ಇದನ್ನನುಸರಿಸಿ ಮನುಷ್ಯನ ಹುಟ್ಟಿವಿಕೆಯಲ್ಲಿ ಗುಣಗಳು ಹೊಸದಾಗಿ ತಗಲಿಕೊಳ್ಳುತ್ತಿಲ್ಲ ಆದರೇ, ಮೊದಲಿನಿಂದಲೂ ಇರುವ ಗುಣಗಳೇ ಬಿಡದೆ ಇರುವುವೆಂದು ತಿಳಿಯುತ್ತಿದೆ. ಮನುಷ್ಯ ಎಲ್ಲಿ ಹುಟ್ಟಿದರೂ ಆತನೊಂದಿಗೆ ಕಾಲ, ಕರ್ಮ, ಗುಣಗಳು ಪ್ರಯಾಣಿಸಿ ಹೋಗುವುದರಿಂದ, ಕಾಲದ ಪ್ರಕಾರ ಯಾವಾಗ ಮರಣಿಸಿದರೇ ಆಗಲೇ ಹುಟ್ಟುವುದು ನಡೆಯುತ್ತಿದೆ. ಕಾಲ ಜೀವಿಯನ್ನು (ಮನುಷ್ಯನನ್ನು) ಬಿಡದೆ ಇರುವುದರಿಂದ ಆತನು ಯಾವಾಗ ಮರಣಿಸಿದರೇ ಆಗಲೇ ಮತ್ತೊಂದು ಕಡೆ ಹುಟ್ಟಬೇಕಾಗಿರುತ್ತದೆ. ಆದ್ದರಿಂದ ಕ್ಷಣವು ಸಹ ಆಲಸ್ಯವಿಲ್ಲದೆ ಮನುಷ್ಯ ಮರಣಿಸಿದ ಕೂಡಲೇ ಮತ್ತೊಂದು ಜನ್ಮವೆತ್ತಬೇಕಾಗಿ ಬಂದಿದೆ. ಮನುಷ್ಯ ಸತ್ತುಹೋದ ತಕ್ಷಣ ಮತ್ತೊಂದುಕಡೆ ಶಿಶುವಾಗಿ ಹುಟ್ಟುತ್ತಿದ್ದಾನೆಂಬ ವಿಷಯ ಬಹಳಜನ ಆಧ್ಯಾತ್ಮಿಕ ಪರಿಚಯವಿರುವವರಿಗೇ ತಿಳಿದಿಲ್ಲ. ಹಾಗೆ ಉಳಿದ ಸಾಮಾನ್ಯ ಮನುಷ್ಯರಿಗೆ ಕಾಲವನ್ನು ಅನುಸರಿಸಿ ಪ್ರತಿ ಕ್ಷಣ ಮನುಷ್ಯ ಜೀವನದಲ್ಲಿ ಇದ್ದಾನೆಂಬ ವಿಷಯ ತಿಳಿದಿಲ್ಲ. ಮನುಷ್ಯ ಮರಣ ಕಾಲದಲ್ಲಿ, ಕರ್ಮದಲ್ಲಿ, ಗುಣಗಳಿಂದ ಜೀವಿಯು ಬಂಧಿಸಲ್ಪಟ್ಟು ಆತ್ಮಜೊತೆ ಬೇರೆ ಜನ್ಮಕ್ಕೆ ಹೋಗುತ್ತಿದ್ದಾನೆಂಬ ವಿಷಯವು ಇತರರಿಗೆ ತಿಳಿದರೂ, ತಿಳಿಯದೆ ಇದ್ದರೂ ನಡೆಯುತ್ತಿರುವ ಸತ್ಯವು ಅಷ್ಟೇ ಎಂದು ಪ್ರತಿಯೊಬ್ಬರು ತಿಳಿಯಬೇಕು. ಜೀವಿಯು ಶರೀರದಲ್ಲಿ ಗುಣಗಳ ಮಧ್ಯದಲ್ಲಿ ನಿವಾಸಿಸುತ್ತಿದ್ದರೂ ಕಾಲ, ಕರ್ಮ ಅಧೀನದಲ್ಲಿಯೇ ಇದ್ದಾನೆ. ಕಾಲ ಒಂದು ಕ್ಷಣ ಸಹ ಆಲಸ್ಯವಿಲ್ಲದೇ ಬೇರೆ ಶಿಶುವಿನ ಶರೀರದಲ್ಲಿ ಕೊನೆಸಾಗಿಸುವಂತೆ ಮಾಡುತ್ತಿದ್ದರೇ, ಕರ್ಮ ಎಡಬಿಡದೇ ಅನುಭವಕ್ಕೆ ಬರುತ್ತಿದೆ. ಮನುಷ್ಯ ಮಾಡಿಕೊಂಡಿರುವ ಕರ್ಮವನ್ನು ಅನುಸರಿಸಿ ಎರಡನೆಯ ಜನ್ಮದಲ್ಲಿನ ಜೀವನ ಹೇಗೆ ಸಾಗಬೇಕೋ ನಿರ್ಣಯಿಸಲ್ಪಡುತ್ತಿದೆ. ವೃದ್ಧನಾಗಿ ಮರಣಿಸಿದವನು

ಪುನಃ ಶಿಶುವಾಗಿ ರೂಪ ಬದಲಾಗಿ ಹುಟ್ಟುತ್ತಿದ್ದಾನೆಂಬ ವಿಷಯವನ್ನು ಬಹಳಜನ ಗ್ರಹಿಸದೆ ಮನುಷ್ಯನಿಗೆ ಎರಡನೆಯ ಜನ್ಮವಿಲ್ಲ ಎಂದು ಹೇಳುತ್ತಿದ್ದಾರೆ. ಭಗವದ್ಗೀತೆಯಲ್ಲಾಗಲೀ ಉಳಿದ ಎರಡು ದೈವಗ್ರಂಥಗಳಲ್ಲಾಗಲೀ ಜನ್ಮಗಳಿವೆ ಯೆಂದು ಹೇಳಿದ್ದರೂ, ಆ ಮಾತನ್ನು ಗ್ರಹಿಸದ ಕೆಲವರು ಜನ್ಮಗಳಿಲ್ಲ ಎನ್ನುತ್ತಿದ್ದಾರೆ. ಭಗವದ್ಗೀತೆಯಲ್ಲಿನ ಮಾತನ್ನು ದೃಢಪಡಿಸುತ್ತಿರುವ ಅಂತಿಮ ದೈವಗ್ರಂಥದಲ್ಲಿನ ಒಂದು ವಾಕ್ಯವನ್ನು ನೋಡೋಣ **(36–68) "ನಾವು ವೃದ್ಧಾಪ್ಯಕ್ಕೆ ಸೇರಿದವರನ್ನು ಪುನಃ ಜನನ ಸ್ಥಿತಿಗೆ ತೆಗೆದುಕೊಂಡು ಹೋಗುತ್ತೇವೆ. ಆದರೂ ಅವರು ಅರ್ಥ ಮಾಡಿಕೊಳ್ಳುವುದಿಲ್ಲ ಏಕೆ?** ಎಂದು ಇರುವ ಆಯತ್‌ನನ್ನು ನೋಡಿದರೇ ವೃದ್ಧನಾಗಿ ಮರಣಿಸಿದವನನ್ನು ದೇವರು ಶಿಶುವಾಗಿ ಹುಟ್ಟುವಂತೆ ಮಾಡುತ್ತಿದ್ದಾ ನೆಂದು ತಿಳಿಯುತ್ತಿದೆ.

ಭೂಮಿಮೇಲೆ ಮುಖ್ಯವಾಗಿ ಮೂರು ಮತಗಳಿವೆ. ಆದರೇ ಅದರಲ್ಲಿ ಒಂದು ಮತ ಪುನರ್ಜನ್ಮಗಳಿವೆಯೆಂದು ಹೇಳುತ್ತಾ ಪುನರ್ಜನ್ಮಗಳನ್ನು ಸಮರ್ಥಿಸುತ್ತಿದ್ದರೇ, ಉಳಿದ ಎರಡು ಮತದವರು ಪುನರ್ಜನ್ಮಗಳು 'ಇಲ್ಲ' ಎಂದು ಹೇಳುತ್ತಿದ್ದಾರೆ. 'ಇವೆ' ಎಂಬ ಪದಕ್ಕೆ ವಿರುದ್ಧ ಪದ 'ಇಲ್ಲ' ಎನ್ನುವುದೇ! ಒಬ್ಬರು 'ಇವೆ' ಎಂದರೇ ಮತ್ತೊಬ್ಬರು 'ಇಲ್ಲ' ಎನ್ನುವುದರಲ್ಲಿಯೇ ಮನುಷ್ಯರ ಮಧ್ಯ ಭೇದಾಭಿಪ್ರಾಯಗಳು ಏರ್ಪಡುತ್ತಿವೆ. ಮನುಷ್ಯ ನಿತ್ಯವೂ ಹುಟ್ಟುತ್ತಿದ್ದಾನೆ ಮತ್ತು ಸಾಯುತ್ತಿದ್ದಾನೆ, ದೈವಗ್ರಂಥಗಳು ಮೂರು ಮನುಷ್ಯನಿಗೆ ಪುನರಪಿ ಜನನ, ಪುನರಪಿ ಮರಣ ಇವೆಯೆಂದು ಹೇಳುತ್ತಿವೆ. ಅದರ ಪ್ರಕಾರವೇ ಮನುಷ್ಯ ಸಾಯುತ್ತಿದ್ದಾನೆ ಪುನಃ ಹುಟ್ಟುತ್ತಿದ್ದಾನೆ ಎಂದು ಹಿಂದೂಗಳು ಹೇಳುತ್ತಿರುವಾಗ, ಉಳಿದ ಎರಡು ಮತದವರು ಮನುಷ್ಯ ಒಂದೇ ಬಾರಿ ಹುಟ್ಟಿ, ಒಂದೇ ಬಾರಿ ಸತ್ತುಹೋಗುತ್ತಿದ್ದಾನೆ. ಪುನಃ ಹುಟ್ಟುವುದು ಸಾಯುವುದು ಅಂತೂ ಇಲ್ಲವೆಂದು ಹೇಳುತ್ತಿದ್ದಾರೆ. ಜನನ ಮರಣಗಳಿವೆ ಎನ್ನುವವರು ಶಾಸ್ತ್ರವನ್ನು ತೋರಿಸದೇ, ಶಾಸ್ತ್ರವನ್ನು ಮರೆತುಹೋಗಿ ಮೊಂಡರಂತೆ ಪುನರ್ಜನ್ಮಗಳಿವೆ ಎನ್ನುತ್ತಿರುವಾಗ, ಉಳಿದ ಮತದವರು ಶಾಸ್ತ್ರಾಧಾರ

ತೋರಿಸದೇ, ಶಾಸ್ತ್ರಪ್ರಮಾಣವಿಲ್ಲದ ಮಾತನ್ನು ಮೊಂಡರಂತೆ ಮಾತನಾಡುತ್ತಿದ್ದಾರೆ. ಹೀಗೆ 'ಜನನ' ಎಂಬ ವಿಷಯದಲ್ಲಿ ಭೇದಾಭಿಪ್ರಾಯಗಳು ಮನುಷ್ಯರ ಮಧ್ಯ ಹುಟ್ಟಿಕೊಂಡಿರುವಾಗ, ಉಳಿದ ಕೆಲವು ವಿಷಯಗಳೊಳಗು ಸಹ ಭೇದಗಳು ಹರಡಿವೆ.

ಪುನರ್ಜನ್ಮಗಳೊಂದಿಗೆ ಶುರುವಾದ ವಾದನೆಯನ್ನು ಯಾರಷ್ಟಕ್ಕೆ ಅವರು ಹೇಳುತ್ತಾ ನಮ್ಮ ಮಾತು ಸತ್ಯವೆಂದು ಒಬ್ಬರುರೆಂದರೇ, ಅಲ್ಲ ನಮ್ಮ ಮಾತೇ ಸತ್ಯವೆಂದು ಇತರರು ಹೇಳುತ್ತಿದ್ದಾರೆ. ಪುನರ್ಜನ್ಮಗಳಿವೆ ಎಂದು ಹೇಳುವವರು ಭಗವದ್ಗೀತೆಯಲ್ಲಿ ಜ್ಞಾನಯೋಗವೆಂಬ ಅಧ್ಯಾಯದಲ್ಲಿ **"ಭಗವಂತನು ಭೂಮಿಮೇಲೆ ಧರ್ಮಗಳಿಗೆ ಯಾವಾಗ ಹಾನಿ ಏರ್ಪಡುತ್ತಿದೆಯೋ, ಅಧರ್ಮಗಳು ಯಾವಾಗ ಹೆಚ್ಚಾಗುತ್ತಿವೆಯೋ ಆಗ ನಾನು ಅವತರಿಸಿ ಧರ್ಮಸಂಸ್ಥಾಪನೆ ಮಾಡುತ್ತೆನೆಂದು** "ಹೇಳಿರುವ ಮಾತನ್ನು ನೆನಪು ಮಾಡುತ್ತಾ, ***"ಈ ವಿಧವಾಗಿ ದೇವರು ಸಹ ಹುಟ್ಟುತ್ತಿದ್ದಾನೆ. ದೇವರೇ ಜನ್ಮ ತೆಗೆದುಕೊಂಡು ಮನುಷ್ಯನಾಗಿ ಹುಟ್ಟುತ್ತಿರುವಾಗ, ಕರ್ಮ ಪ್ರಕಾರ ಮನುಷ್ಯ ಏಕೆ ಹುಟ್ಟುವುದಿಲ್ಲ?"*** ಎಂದು ಹೇಳುತ್ತಿದ್ದಾರೆ. ಮನುಷ್ಯನ ಜನ್ಮವನ್ನೇ ಒಪ್ಪಿಕೊಳ್ಳದ ಇತರ ಸಮಾಜದವರು ದೇವರೇ ಹುಟ್ಟುತ್ತಿದ್ದಾನೆಂಬ ಮಾತನ್ನು ಪೂರ್ತಿ ಒಪ್ಪಿಕೊಳ್ಳುತ್ತಿಲ್ಲ. ಮೇಲಾಗಿ ದೇವರು ಹುಟ್ಟುವುದಿಲ್ಲವೆಂದು, ದೇವರು ಜನ್ಮಿಸುವವನೇ ಅಲ್ಲವೆಂದೂ ದೃಢವಾಗಿ ಹೇಳುತ್ತಿದ್ದಾರೆ. ಮನುಷ್ಯ ಜನ್ಮ ವಿಷಯವಾಗಲಿ, ದೇವರ ಜನ್ಮ ವಿಷಯವಾಗಲಿ ದೈವಗ್ರಂಥಗಳಲ್ಲಿ ಬ್ರಹ್ಮವಿದ್ಯಾ ಶಾಸ್ತ್ರವನ್ನು ಅನುಸರಿಸಿ ಹೇಳಿರುವಾಗ, ಮನುಷ್ಯರು ಶಾಸ್ತ್ರಾಧಾರವನ್ನು ನೋಡದೇ ತಮಗಿಂತಲೂ ಮೊದಲು ಹೇಳಿರುವವರ ಮಾತುಗಳನ್ನೇ ಕೇಳಿ, ಆ ಮಾತುಗಳನ್ನೇ ವಿಶ್ವಾಶಿಸಿದವರಾಗಿ ದೇವರಿಗೆ ಜನ್ಮ ಇಲ್ಲವೇ ಇಲ್ಲವೆಂದು ಹೇಳುತ್ತಿದ್ದಾರೆ.

ಒಂದು ನಾಣ್ಯಕ್ಕೆ ಎರಡೂಕಡೆ ರಾಜ ರಾಣಿ ಇರುವಹಾಗೆ, ಪ್ರತಿ ವಿಷಯದಲ್ಲೂ ಎರಡುಕಡೆ ಸತ್ಯಾಸತ್ಯಗಳಿರುತ್ತವೆ. ನಾಣ್ಯಕ್ಕೆ ಒಂದುಕಡೆ ರಾಜ ಇದ್ದರೇ ಮತ್ತೊಂದುಕಡೆ ರಾಣಿ ಇರುತ್ತದೆ. ಒಂದು ಆಕಾರವಿರುವುದನ್ನು

ರಾಜ ಎನ್ನುತ್ತೇವೆ. ಆಕಾರ ಇಲ್ಲದಿರುವುದನ್ನು ರಾಣಿ ಎನ್ನುತ್ತೇವೆ. ಹಾಗೆಯೇ ಒಂದು ವಿಷಯಕ್ಕೆ ಒಂದುಕಡೆ ಸತ್ಯವಿರುತ್ತದೆ, ಮತ್ತೊಂದುಕಡೆ ಸತ್ಯ ಅಲ್ಲದಿರುವುದು ಅಸತ್ಯವಿರುತ್ತದೆ. ಈಗ 'ಪುನರ್ಜನ್ಮ' ಎಂಬ ಒಂದು ವಿಷಯವನ್ನು ತೆಗೆದುಕೊಂಡು ನೋಡಿದರೇ ಒಂದುಕಡೆಯವರು 'ಇದೆ' ಎಂದು ಹೇಳಬಹುದು, ಮತ್ತೊಂದು ಕಡೆಯವರು 'ಇಲ್ಲ' ಎಂದು ಸಹ ಹೇಳಬಹುದು. ಒಂದು ನಾಣ್ಯಕ್ಕೆ ಒಂದುಕಡೆ ರಾಜ ಮತ್ತೊಂದುಕಡೆ ರಾಣಿ ಇರುವಂತೆ, 'ಪುನರ್ಜನ್ಮ' ಎಂಬ ವಿಷಯಕ್ಕೆ ಸತ್ಯ ಅಸತ್ಯ ಎರಡು ಇರುತ್ತದೆ. ನಾಣ್ಯಕ್ಕೆ ಒಂದು ಆಕಾರ ಇರುವುದನ್ನೇ ರಾಜ ಎನ್ನುವಂತೆ, ಒಂದು ವಿಷಯಕ್ಕೆ ಶಾಸ್ತ್ರಾಧಾರ ಇರುವುದನ್ನೇ ಸತ್ಯ ಎನ್ನುತ್ತಿದ್ದೇವೆ. ಶಾಸ್ತ್ರಾಧಾರ ಇಲ್ಲದಿರುವುದನ್ನು ಅಸತ್ಯ ಎನ್ನುತ್ತಿದ್ದೇವೆ. ಈ ವಿಧವಾಗಿ ಪ್ರತಿ ವಿಷಯಕ್ಕು ಶಾಸ್ತ್ರಾಧಾರವನ್ನು ಅನುಸರಿಸಿ ಸತ್ಯಾಸತ್ಯಗಳು ನಿರ್ಣಯಿಸಲ್ಪಡುತ್ತದೆ. ಪುನರ್ಜನ್ಮ ವಿಷಯಕ್ಕೆ ಬಂದರೇ ಬ್ರಹ್ಮವಿದ್ಯಾ ಶಾಸ್ತ್ರವನ್ನು ಅನುಸರಿಸಿ ಅದು ಸತ್ಯವೋ ಅಲ್ಲವೋ ತಿಳಿಯಬಲ್ಲದು. ಆದರೇ ಕೆಲವರಿಗೆ ಶಾಸ್ತ್ರವೆಂದರೇ ಏನೋ ತಿಳಿಯದಿರುವಾಗ ಅವರು ಶಾಸ್ತ್ರದ ಬಳಿಗೆ ಹೋಗುವುದಿಲ್ಲ. ಶಾಸ್ತ್ರಾಧಾರದಿಂದ ನೋಡುವುದಿಲ್ಲ. ಅಂತವರಿಗೆ ಶಾಸ್ತ್ರ ಎನ್ನುವುದು ಸತ್ಯಾಸತ್ಯಗಳನ್ನು ನಿರ್ಧಾರಿಸಿ ತೋರಿಸುವ ಭೂತಕನ್ನಡಿ ಯಂಥದ್ದೆಂದು ತಿಳಿದಿಲ್ಲ. ಅವರು ತಮಗಿಂತ ಮೊದಲಿರುವ ಮನುಷ್ಯರು ಹೇಳಿದ ಮಾತನ್ನೇ ಹೇಳುತ್ತಾ, ಶಾಸ್ತ್ರವನ್ನು ಸ್ವಲ್ಪವೂ ನೋಡದೆ ಕುರುಡರಂತೆ ಅಸತ್ಯವನ್ನೇ ಹೇಳುತ್ತಿರುತ್ತಾರೆ.

ಪುನರ್ಜನ್ಮಗಳ ವಿಷಯವನ್ನು ಕುರಿತಾದ ಸತ್ಯ ಬ್ರಹ್ಮವಿದ್ಯಾ ಶಾಸ್ತ್ರದಲ್ಲಿದೆ. ಅದೇ ವಿಧವಾಗಿ ಪ್ರಪಂಚದಲ್ಲಿನ ಎಲ್ಲಾ ವಿಷಯಗಳು ಆರು ಶಾಸ್ತ್ರಗಳಿಗೆ ಸಂಬಂಧಿಸಿ ಇವೆ. ಆರು ಶಾಸ್ತ್ರಗಳು ಪ್ರತಿ ವಿಷಯದಲ್ಲಿನ ಸತ್ಯಾಸತ್ಯಗಳನ್ನು ತಿಳಿಸುತ್ತಿವೆ. ಒಬ್ಬ ಮನುಷ್ಯನಿಗೆ ಓದುಬರಹ ಬರದಿರುವಾಗ, ಶಾಸ್ತ್ರವೆಂದರೇ ಏನೋ ತಿಳಿಯದಿರುವಾಗ, ಆತನು ಇತರರು ಹೇಳುವ ಮಾತುಗಳ ಮೇಲೆಯೇ ಆಧಾರಪಡಬೇಕಾಗಿರುತ್ತದೆ. ಆಗ ಆ ವ್ಯಕ್ತಿ ಹೇಳಿರುವವನನ್ನು ಅನುಸರಿಸಿ, ಕೇಳಿರುವ ಮಾತುಗಳನ್ನು ಅನುಸರಿಸಿ ಯಾವ ವಿಷಯವನ್ನಾದರೂ ನಂಬುವನು

ಆದರೇ, ಆತನಿಗೆ ಶಾಸ್ತ್ರವೆನ್ನುವುದೂ ಒಂದಿದೆಯೆಂದೂ, ಅದು ಸತ್ಯಾಸತ್ಯಗಳನ್ನು ನಿರ್ಧರಿಸಿ ಹೇಳುವುದೆಂದು ತಿಳಿದಿಲ್ಲ. ಈಗ ಒಂದುಕಡೆ ನಡೆದ ಸಂಘಟನೆಯನ್ನು ವಿವರಿಸಿಕೊಂಡು ಹೇಳಿಕೊಳ್ಳೋಣ. ಒಂದುಹತ್ತುಜನ ಓದುಬರಹ ಬಾರದವರು, ಶಾಸ್ತ್ರ ವಿಷಯ ತಿಳಿಯದವರು ಓದು ಬರುವಂತಹ ಒಬ್ಬ ವ್ಯಕ್ತಿ ಹತ್ತಿರಕ್ಕೆ ಹೋಗಿ ತಮ್ಮ ಸಂಶಯಗಳಿಗೆ ಪರಿಷ್ಕಾರ ತಿಳಿದುಕೊಳ್ಳಬೇಕೆಂದುಕೊಂಡರು. ಹತ್ತುಜನ ಆಶ್ರಯಿಸಿದ ವ್ಯಕ್ತಿಯನ್ನು ಬೋಧಿಸುವವನಾಗಿ, ಗುರುವಾಗಿ, ಮಾರ್ಗದರ್ಶಕನಾಗಿ ಹೇಳಿಕೊಳ್ಳುತ್ತಿದ್ದರು. ಆತನು ಏನು ಹೇಳಿದರೆ ಅದನ್ನೇ ಸತ್ಯವೆಂದು ವಿಶ್ವಾಸಿಸುತ್ತಿದ್ದರು. ಹತ್ತುಜನರಿಗೆ ಬೋಧನೆ ಹೇಳುವ ವ್ಯಕ್ತಿ ಸಹ ಶಾಸ್ತ್ರವನ್ನೇ ಆಧಾರ ಮಾಡಿಕೊಂಡು, ಪ್ರತಿ ವಿಷಯದಲ್ಲೂ ಸತ್ಯವನ್ನೇ ಹೇಳುತ್ತಿದ್ದನು. ಹತ್ತುಜನಕ್ಕೆ ಪ್ರತಿ ವಿಷಯವನ್ನು ಹೇಳುವ ಬೋಧಕನು ಮಾತ್ರ ಎಷ್ಟೋ ನಿಜಾಯಿತಿ ಇರುವವನಾಗಿ ತಾನು ಹೇಳುವ ಬೋಧನೆ ಮೇಲೆ ಹತ್ತುಜನ ಆಧಾರಪಟ್ಟು ಸತ್ಯಾಸತ್ಯಗಳು ತಿಳಿದುಕೊಳ್ಳುತ್ತಿದ್ದಾರೆಂದು, ಎಷ್ಟೋ ಕಾಳಿಜಿಯಿಂದ ಶಾಸ್ತ್ರವನ್ನು ಅನುಸರಿಸಿ ಸತ್ಯವನ್ನೇ ಹೇಳುತ್ತಿರುತ್ತಾನೆ. ಕೇಳಿಸಿಕೊಳ್ಳುವವರ ಉದ್ದೇಶ ಒಳ್ಳೆಯದೇ, ಅವರು ಸತ್ಯವನ್ನು ತಿಳಿಯಬೇಕೆಂಬ ಉದ್ದೇಶದಿಂದಲೇ ಒಂದು ಒಳ್ಳೆಯ ವ್ಯಕ್ತಿಯನ್ನು, ಶಾಸ್ತ್ರವನ್ನು ತಿಳಿದ ವ್ಯಕ್ತಿಯನ್ನು ಆಶ್ರಯಿಸಿದ್ದಾರೆ. ಅವರಿಗೆ ತಿಳಿಸುವ ವ್ಯಕ್ತಿ ಸಹ ನೀತಿ, ನಿಜಾಯಿತಿ ಇರುವವನಾಗಿ ಎಷ್ಟೋ ಉತ್ತಮನಾಗಿ ಇರುತ್ತಾನೆ.

ಬೋಧನೆ ಹೇಳುವವನು ಸತ್ಯವನ್ನು ಹೇಳಿದರೂ ಅಸತ್ಯವನ್ನು ಹೇಳಿದರೂ ಕೇಳುವವನು ಅದನ್ನು ಎರಡು ಮಾರ್ಗಗಳ ಮೂಲಕ ಗ್ರಹಿಸುತ್ತಿದ್ದಾನೆ. ಹೇಳುವವನು ಸತ್ಯವನ್ನೇ ಹೇಳುತ್ತಿದ್ದರೂ ಅದು ಮನುಷ್ಯನಲ್ಲಿನ ಬುದ್ಧಿಗೆ ಸೇರಬೇಕೆಂದರೇ ಒಂದು ನೋಟದಿಂದ, ಎರಡು ಶಬ್ಧದ ಮೂಲಕ ಸೇರಬೇಕಾಗಿದೆ. ದೃಷ್ಠಿ ಕಣ್ಣಿನ ಮೂಲಕ ಉಂಟಾಗುತ್ತಿದೆ. ಶಬ್ಧ ಕಿವಿಯ ಮೂಲಕ ಉಂಟಾಗುತ್ತಿದೆ. ಆರೋಗ್ಯವಾದ ಕಣ್ಣಿಗೆ ದೃಷ್ಠಿ ಲೋಪವಿರುವುದಿಲ್ಲ. ಹಾಗೆಯೇ ಆರೋಗ್ಯವಾಗಿರುವ ಕಿವಿಗೆ ಶಬ್ಧ ಲೋಪವಾದ ಕಿವುಡುತನ

ಇರುವುದಿಲ್ಲ. ಕಣ್ಣು ತಾನು ನೋಡಿದ ದೃಶ್ಯವನ್ನು ನೋಡಿದಹಾಗೆಯೇ ದೃಷ್ಟಿ ಮೂಲಕ ಸೇರಿಸಿದರೂ, ಹಾಗೆಯೇ ಕಿವಿ ತಾನು ಕೇಳಿದ ಶಬ್ಧವನ್ನು ಕೇಳಿರುವುದು ಕೇಳಿದಹಾಗೆಯೇ ಶಬ್ಧದ ಮೂಲಕ ಒಳಗೆ ಸೇರಿಸಿದರೂ, ಅದನ್ನು ಮನಸ್ಸು ತೆಗೆದುಕೊಂಡು ಒಳಗೆ ತಲೆಯೊಳಗಿರುವ ಬುದ್ಧಿಗೆ ಸೇರಿಸಬೇಕಾಗಿರುತ್ತದೆ. ಹೊರಗೆ ಬೋಧಕನು ಸರಿಯಾಗಿ ಸತ್ಯವನ್ನೇ ಹೇಳಿದರೂ, ಕಿವಿ ಕೇಳಿರುವುದನ್ನೇ ಒಳಗೆ ತಿಳಿಸಿದರೂ, ಮನಸ್ಸು ಸರಿಯಾಗಿ ಕೆಲಸ ಮಾಡದೆ ಹೋದರೇ ಹೊರಗಿನಿಂದ ಬಂದ ವಿಷಯವು ಪೂರ್ತಿಯಾಗಿ ಬುದ್ಧಿಗೆ ಸೇರುವುದಿಲ್ಲ. ಆಗ ಕೇಳಿರುವ ವಿಷಯ, ಗುರು ಹೇಳಿರುವ ವಿಷಯವು ಶಿಷ್ಯನಿಗೆ ತಿಳಿಯದೆ ಹೋಗುವುದಕ್ಕೆ ಅವಕಾಶವಿದೆ. ಹಾಗೆಯೇ ಹೊರಗೆ ಕಣ್ಣಿನ ಮೂಲಕ ತಿಳಿದ ದೃಶ್ಯರೂಪವಾದ ವಿಷಯವನ್ನು ಮನಸ್ಸು ಸರಿಯಾಗಿ ಗ್ರಹಿಸಿ ತೆಗೆದುಕೊಂಡುಹೋಗಿ ಒಳಗಿರುವ ಬುದ್ಧಿಗೆ ತಿಳಿಸದೆ ಇದ್ದರೇ ಗುರು ತೋರಿಸಿರುವುದು, ತಾನು ನೋಡಿರುವುದು ಬುದ್ಧಿಗೆ ತಿಳಿಯದೆ ಹೋಗುವುದು. ಹಾಗೆಯೇ ಪೂರ್ತಿಯಾಗಿ ಮನಸ್ಸಿಗೆ ತಿಳಿಯದೇ ಹೋಗುವುದು. ಪ್ರತಿ ಮನುಷ್ಯನಲ್ಲಿಯೂ ಕಣ್ಣು ತೋರಿಸಿದ ದೃಶ್ಯವನ್ನು, ಕಿವಿ ಕೇಳಿದ ಶಬ್ಧವನ್ನು ಕಣ್ಣು, ಕಿವಿ ಒಳಗೆ ತಿಳಿಸಿದರೇ, ಕಿವಿಯವರೆಗು, ಕಣ್ಣಿನವರೆಗು ವ್ಯಾಪಿಸಿರುವ ಮನಸ್ಸು ಕಿವಿ, ಕಣ್ಣು ತಿಳಿಸಿರುವ ವಿಷಯವನ್ನು ಸ್ವೀಕರಿಸಿ ಅದನ್ನು ಹೊತ್ತುಕೊಂಡು ತಲೆಯಲ್ಲಿರುವ ಗುಣಚಕ್ರದಲ್ಲಿನ ಜೀವಿಯ ವರೆಗು ಹೋಗಿ, ಅಲ್ಲಿ ಜೀವಿಯ ಸುತ್ತಾ ಪೊರೆಯಾಗಿರುವ ಬುದ್ಧಿಗೆ ಸೇರಿಸಬೇಕಾಗಿರುತ್ತದೆ. ಆ ವಿಧವಾಗಿ ಮನಸ್ಸು ಹೊರಗಿನ ಜ್ಞಾನೇಂದ್ರಿಯಗಳಾದ ಕಣ್ಣು, ಕಿವಿ ತಿಸಿಳಿದ ವಿಷಯಗಳನ್ನು ತೆಗೆದುಕೊಂಡು ಜೀವಿಯ ಪಕ್ಕದಲ್ಲೇ ಇರುವ ಬುದ್ಧಿಗೆ ಸೇರಿಸಬೇಕಾಗಿದೆ. ಗುರುವಿನಿಂದ ಹೊರಬಂದ ವಿಷಯವು ಹೊರಗೆ ಕಿವಿ, ಕಣ್ಣು ಮೂಲಕ ಶರೀರದಲ್ಲಿ ಎಲ್ಲೆಡೆ ವ್ಯಾಪಿಸಿರುವ ಮನಸ್ಸಿಗೆ ತಿಳಿಸುತ್ತಿದೆ. ಎಚ್ಚರದಲ್ಲಿ ಮನಸ್ಸು ಶರೀರವೆಲ್ಲಾ ವ್ಯಾಪಿಸಿರುವುದರಿಂದ ಕಣ್ಣು, ಕಿವಿಯವರೆಗು ವ್ಯಾಪಿಸಿರುವ ಮನಸ್ಸು ಶಬ್ಧವನ್ನು, ದೃಶ್ಯವನ್ನು ತೆಗೆದುಕೊಂಡು, ಬುದ್ಧಿವರೆಗು ಮನಸ್ಸು ವ್ಯಾಪಿಸಿರುವುದರಿಂದ ಆಲಸ್ಯವಿಲ್ಲದೆ ತಕ್ಷಣವೇ ಬುದ್ಧಿಗೆ ತಿಳಿಸುತ್ತಿದೆ. ವಿಷಯವು

ಬುದ್ಧಿಗೆ ಮನಸ್ಸಿನ ಮೂಲಕ ಸೇರಿದಾಗ ಆ ವಿಷಯವು ಅಲ್ಲೇ ಇರುವ ಜೀವಿಗೆ ಸೇರಿದಂತಾಗಿದೆ. ಆಗ ಆ ವಿಷಯವು ಇಂಥದ್ದೇ ಎಂದು ಜೀವಿಯು ತಿಳಿಯುವುದೇ ಅಲ್ಲದೇ ಆ ವಿಷಯದಲ್ಲಿರುವ ಸುಖದುಃಖ ಅನುಭವವನ್ನು ಜೀವಿಯು ಹೊಂದುತ್ತಿದ್ದಾನೆ. ಶರೀರದಲ್ಲಿನ 24 ಭಾಗಗಳಲ್ಲಿ 23 ಭಾಗಗಳಿಗೆ ಪರಿಮಿತ ಸ್ಥಾನಗಳಿರುವಾಗ, ಒಂದು ಮನಸ್ಸಿಗೆ ಮಾತ್ರ ಪರಿಮಿತ ಸ್ಥಾನವಿಲ್ಲ. ಮನಸ್ಸು ಶರೀರವೆಲ್ಲವೂ ನಖ ಶಿಖ ಪರ್ಯಂತ ವ್ಯಾಪಿಸಿದೆ. ಹಾಗೆ ಎಚ್ಚರಿಕೆಯಲ್ಲಿ ಮಾತ್ರ ಶರೀರವೆಲ್ಲಾ ವ್ಯಾಪಿಸಿರುವ ಮನಸ್ಸು ನಿದ್ರೆಯಲ್ಲಿ ಬ್ರಹ್ಮನಾಡಿಯಲ್ಲಿ ಮೇಲಿನ ಭಾಗದಲ್ಲಿ ಸೇರಿಹೋಗುತ್ತಿದೆ. ಮನಸ್ಸು ಶರೀರವೆಲ್ಲಾ ಎಚ್ಚರದಲ್ಲಿರುವಾಗ ಹೊರಗಿನ ಅವಯವಗಳಾದ ಜ್ಞಾನೇಂದ್ರಿಯ ಕರ್ಮೇಂದ್ರಿ ಯಗಳಿಗೆ ಒಳಗಿನ ಅವಯವಗಳಾದ ಬುದ್ಧಿ, ಚಿತ್ತ, ಅಹಂಗೆ ಮಧ್ಯವರ್ತಿಯಾಗಿ ಕೆಲಸ ಮಾಡುತ್ತಿದೆ. ಬುದ್ದಿ, ಚಿತ್ತ, ಅಹಂ ಎಂಬ ಮೂರು ಪೊರೆಗಳು ಶೂನ್ಯವಾಗಿರುವ ಜೀವಿಯ ಸುತ್ತಲೂ ಇರುವುದರಿಂದ ಮನಸ್ಸಿನ ಮೂಲಕ ಬಂದಿರುವ ವಿಷಯ ಅಹಂಗೆ ತಿಳಿದಕೂಡಲೇ ಅದರ ಪಕ್ಕದಲ್ಲೇ ಇರುವ ಚಿತ್ತಕ್ಕೆ ತಿಳಿಯುತ್ತಿದೆ. ಚಿತ್ತಕ್ಕೆ ತಿಳಿದ ಕೂಡಲೇ ಅದರ ಪಕ್ಕದಲ್ಲೇ ಇರುವ ಬುದ್ಧಿಗೆ ತಿಳಿಯುತ್ತಿದೆ. ಬುದ್ಧಿಗೆ ತಿಳಿದ ಕೂಡಲೇ ಬುದ್ಧಿಗೆ ಅಂಟಿಕೊಂಡಿರುವ ಜೀವಿಗೆ ತಿಳಿಯುತ್ತಿದೆ. ಶರೀರದೊಳಗೆ ಯಾರಿಗೂ ಕಾಣಿಸದ ಜೀವಿಯು ಮತ್ತು ನಾಲಕ್ಕು ಅಂತಃಕರಣಗಳು ಹೇಗೆ ಇದೆ ಪಕ್ಕದ ಪೇಜಿನಲ್ಲಿನ ಚಿತ್ರಪಟದಲ್ಲಿ ನೋಡಬಹುದು.

ಹೊರಗೆ ಬೋಧಕನು ಅಥವಾ ಗುರು ಬೋಧಿಸಿರುವ ವಿಷಯವು ಮನುಷ್ಯನಲ್ಲಿನ ಬುದ್ಧಿಗೆ ಸೇರುವುದರೊಳಗೆ ಹೊರಗಿನ ಅವಯವಗಳ ಹತ್ತಿರವಾಗಲೀ, ಮನಸ್ಸಿನ ಹತ್ತಿರವಾಗಲೀ ತಪ್ಪುದಾರಿ ಹಿಡಿಯುವ ಅವಕಾಶವಿದೆ. ಬೋಧಿಸಿರುವುದು ಬಾಹ್ಯ ಅವಯವಗಳಿಗೆ ಹೇಳಿರುವ ವಿಷಯವು ಸರಿಯಾಗಿ ಸೇರದಿದ್ದರೂ, ಒಂದುವೇಳೆ ಸರಿಯಾಗಿ ಸೇರಿದರೂ ಮನಸ್ಸು ಗ್ರಹಿಸಿಕೊಳ್ಳುವು ದರಲ್ಲಿ ತಪ್ಪುಮಾಡಿದರೂ, ಕೊನೆಗೆ ಬುದ್ಧಿ ಗ್ರಹಿಸಿಕೊಳ್ಳುವುದರಲ್ಲಿ ತಪ್ಪು ನಡೆದರೂ ಗುರು ಹೇಳಿರುವ ವಿಷಯ ಬುದ್ಧಿಗೆ ಸರಿಯಾಗಿ ಸೇರದಂತಾಗುವುದು.




ಒಂದುವೇಳೆ ಬೋಧಿಸಿರುವ ಬೋಧಕನು ಶಾಸ್ತ್ರಬದ್ಧತೆ ಇಲ್ಲದ ಬೋಧನೆ ಹೇಳಿದ್ದರೂ ಮೊದಲಿಗೇ ಮೋಸವೆನ್ನುವಂತೆ ಸತ್ಯವಾದ ವಿಷಯವೇ ಮನುಷ್ಯನಿಗೆ ತಿಳಿಯದೆ ಹೋದಂತಾಗುವುದು. ಗುರು ಮೂಲಕ ಕೇಳುವ ಮನುಷ್ಯರು ಗುರುವಿನಿಂದ ಶಾಸ್ತ್ರಬದ್ಧ ಬೋಧನೆ ಕೇಳಿದರೂ ಅದು ಮನಸ್ಸು, ಬುದ್ಧಿ ಸಕ್ರಮವಾಗಿ ಸ್ವೀಕರಿಸಿದಾಗಲೇ ಜೀವಿಯವರೆಗು ಸರಿಯಾಗಿ ಭಾವನೆಯೊಂದಿಗೆ ಸೇರಿದಂತಾಗುವುದು. ಪ್ರತಿ ವಿಷಯದಲ್ಲೂ ಸತ್ಯಾಸತ್ಯಗಳಿವೆ. ಆದರೇ ಗುರು ಅಥವಾ ಬೋಧಕನು ಶಾಸ್ತ್ರವನ್ನು ಅನುಸರಿಸಿ ಸತ್ಯವನ್ನೇ ಬೋಧಿಸಿದರೂ, ಅದು ಮನೋಗ್ರಾಹಿತ ಹತ್ತರವಾಗಲೀ, ಬುದ್ಧೀ ಗ್ರಾಹಿತದ ಹತ್ತಿರವಾಗಲೀ, ತಪ್ಪು ಭಾವನೆಯೊಳಗೆ ಹೋಗುವ ಅವಕಾಶವಿದೆ.

ಒಂದು ವಿಷಯವು ಒಬ್ಬ ಮನುಷ್ಯನಿಂದ ಮತ್ತೊಬ್ಬ ಮನುಷ್ಯನಿಗೆ ಸಕ್ರಮವಾಗಿ ಹೇಳಿರುವುದು ಹೇಳಿದಂತೆ ಸೇರಬಹುದು ಅಥವಾ ಹೇಳಿರುವುದು

ಹೇಳಿದಂತಲ್ಲದೆ ಬೇರೆ ವಿಧ ಭಾವನೆಯಾಗಿ ಸಹ ಸೇರಬಹುದು. ಹತ್ತುಜನ ಒಂದುಕಡೆ ಸೇರಿ ಒಬ್ಬ ಗುರುವನ್ನು ಆಶ್ರಯಿಸಿ ಆತನ ಮೂಲಕ ತಮಗೆ ತಿಳಿಯದ ಕೆಲವು ವಿಷಯಗಳನ್ನು ತಿಳಿದುಕೊಳ್ಳುತ್ತಿದ್ದರು. ಆದರೇ ಆ ಗುರು ಶಾಸ್ತ್ರಬದ್ಧವಾದ ವಿಷಯಗಳನ್ನೇ ಹೇಳದೆ ಕೆಲವು ಶಾಸ್ತ್ರಗಳಿಗೆ ಸಂಬಂಧವಿಲ್ಲದ ವಿಷಯಗಳನ್ನು ಸಹ ಹೇಳುತ್ತಿದ್ದನು. ಅದರಲ್ಲಿ ಕೆಲವು ಅಶಾಸ್ತ್ರೀಯ ವಿಷಯಗಳಾಗಿರುವುದರಿಂದ ಅವು ಸತ್ಯವಲ್ಲದಾಗಿ ಅಸತ್ಯ ವಿಷಯಗಳಾಗಿ ಇದ್ದವು. ಕೇಳುವವರಿಗೆ ಯಾವುದು ಸತ್ಯವೋ, ಯಾವುದು ಅಸತ್ಯವೋ ತಿಳಿದಿಲ್ಲವಾದ್ದರಿಂದ ಅವರು ಎಲ್ಲಾ ಸತ್ಯವೆಂಬ ಭಾವನೆಯಿಂದಲೇ ಕೇಳುತ್ತಿದ್ದನು. ಇದು ಹೀಗಿರುವಾಗ ಮತ್ತೊಂದು ಹದಿನೈದುಜನ ಒಂದು ಗುಂಪಾಗಿ ಏರ್ಪಟ್ಟು ಅವರು ಸಹ ಒಬ್ಬ ಬೋಧಕನನ್ನು ನೋಡಿಕೊಂಡು ಆತನ ಮೂಲಕ ತಮಗೆ ತಿಳಿಯದ ವಿಷಯಗಳನ್ನು ತಿಳಿದುಕೊಳ್ಳಬೇಕೆಂದುಕೊಂಡಿದ್ದಾರೆ. ಅವರು ಅಂದುಕೊಂಡಹಾಗೆಯೇ ಒಬ್ಬ ಗುರುವನ್ನು ಆಯ್ಕೆ ಮಾಡಿಕೊಂಡು ಆತನ ಮೂಲಕ ಬೋಧನೆಗಳನ್ನು ಕೇಳುವುದಕ್ಕೆ ಪ್ರಾರಂಭಿಸಿದರು. ಹದಿನೈದು ಜನರಿಗೆ ಹೇಳುವ ಗುರು ತನ್ನ ಬೋಧನೆಗಳೆಲ್ಲವನ್ನು ಶಾಸ್ತ್ರಕ್ಕೆ ಸಂಬಂಧಿಸಿದ ವಿಷಯಗಳನ್ನೇ ಹೇಳುತ್ತಿದ್ದನು. ಹಾಗೆ ಶಾಸ್ತ್ರಬದ್ಧ ವಿಷಯಗಳನ್ನು ಹೇಳುವುದರಿಂದ ಅವರಿಗೆ ತಿಳಿಯುವ ವಿಷಯಗಳೆಲ್ಲವೂ ಸತ್ಯದಿಂದ ಕೂಡಿಕೊಂಡಿರುವ ವಿಷಯಗಳೇ ಆಗಿದ್ದವು. ಹೀಗೆ ಹತ್ತುಜನ ಒಂದು ಗುಂಪು, ಹದಿನೈದುಜನ ಒಂದು ಗುಂಪಾಗಿ ಬೇರೆಬೇರೆ ಬೋಧಕರನ್ನು ಆಶ್ರಯಿಸಿ ತಮಗೆ ತಿಳಿಯದ ವಿಷಯಗಳನ್ನು ತಿಳಿಯುತ್ತಿದ್ದರು. ಇವರು ಹೀಗಿರುವಾಗ ಮತ್ತೊಂದು ಐದುಜನ ಓದುಬರಹ ಬಂದವರು ಒಂದು ಗುಂಪಾಗಿ ಏರ್ಪಟ್ಟು ತಾವೇ ಸ್ವತಃವಾಗಿ ಗ್ರಂಥಗಳಲ್ಲಿ ಇರುವ ವಿಷಯಗಳನ್ನು ಓದಿ ತಿಳಿದುಕೊಳ್ಳುತ್ತಿದ್ದರು. ಈ ವಿಧವಾಗಿ ಮೂರು ಗುಂಪುಗಳಾಗಿರುವ ಮನುಷ್ಯರು ತಮಗೆ ತಿಳಿಯದ ವಿಷಯಗಳನ್ನು ತಿಳಿಯುತ್ತಿದ್ದರು. ಎರಡು ಗುಂಪುಗಳು ಇತರೆ ಬೋಧಕರು ಹೇಳುವ ಬೋಧನೆಗಳನ್ನು ಕೇಳುತ್ತಿರುವಾಗ, ಐದುಜನ ಗುಂಪು ಇರುವವರು ತಾವೇ ಸ್ವತಃವಾಗಿ ಗ್ರಂಥಗಳಲ್ಲಿನ ವಿಷಯಗಳನ್ನು ಗ್ರಹಿಸುತ್ತಿದ್ದರು. ಈ ವಿಧವಾದ

ಮೂರು ಗುಂಪುಗಳಲ್ಲಿ ಮೊದಲನೆಯದಾದ ಹತ್ತುಜನ ಗುಂಪು ಹೆಚ್ಚಾಗಿ ಶಾಸ್ತ್ರಕ್ಕೆ ಸಂಬಂಧವಿಲ್ಲದ ವಿಷಯಗಳನ್ನೇ ಕೇಳುತ್ತಿದ್ದರು. ಆದ್ದರಿಂದ ಅವರಿಗೆ ಹೆಚ್ಚಾಗಿ ಅಸತ್ಯ ವಿಷಯಗಳೇ ತಿಳಿಯುತ್ತಿದ್ದವು. ಹದಿನೈದು ಜನರಿರುವ ಮಧ್ಯ ಗುಂಪಿನಲ್ಲಿನ ಮನುಷ್ಯರು ಹೆಚ್ಚು ಶಾಸ್ತ್ರವಿಷಯಗಳು ತಿಳಿಯುತ್ತಿದ್ದರೂ ಎಲ್ಲಾದರೂ ಅವುಗಳ ಮಧ್ಯದಲ್ಲಿ ಒಂದು, ಎರಡು ಶಾಸ್ತ್ರವಲ್ಲದ ಅಸತ್ಯ ವಿಷಯಗಳನ್ನು ಸಹ ತಿಳಿಯುತ್ತಿದ್ದರು. ಮೂರನೆಯ ಗುಂಪಾದ ಐದುಜನ ತಾವೇ ಸ್ವತಃವಾಗಿ ಶಾಸ್ತ್ರಗಳನ್ನೇ ಓದುವುದರಿಂದ, ಅವುಗಳನ್ನು ಸಕ್ರಮವಾಗಿ ಅರ್ಥ ಮಾಡಿಕೊಳ್ಳುವುದರಿಂದ ಅವರಿಗೆ ಸುಮಾರು ಎಲ್ಲಾ ಸತ್ಯ ವಿಷಯಗಳೇ ತಿಳಿಯುತ್ತಿದ್ದವು.

ಮೊದಲ ಹತ್ತುಜನ ಗುಂಪು ಇರುವವರ ಗುರು ಭಗವದ್ಗೀತೆಯಲ್ಲಿನ ಜ್ಞಾನಯೋಗದಲ್ಲಿರುವ 13ನೇ ಶ್ಲೋಕವನ್ನು ತೆಗೆದುಕೊಂಡು ಅದಕ್ಕೆ ವಿವರವನ್ನು ಹೇಳುತ್ತಾ "ಯುಗ ಪುರುಷನ ಮುಖದಲ್ಲಿ ಹುಟ್ಟಿರುವವರು ಬ್ರಾಹ್ಮಣರು, ಬಾಹುಗಳಿಂದ ಹುಟ್ಟಿರುವವರು ಕ್ಷತ್ರಿಯರು, ತೊಡೆಗಳಿಂದ ಹುಟ್ಟಿರುವವರು ವೈಶ್ಯರು, ಪಾದಗಳಿಂದ ಹುಟ್ಟಿರುವವರು ಶೂದ್ರರು" ಎಂದು ಹೇಳಿದ್ದಾನೆ. ದೇವರು ಶ್ಲೋಕದಲ್ಲಿ **"ಚಾತುರ್ವರ್ಣ್ಯಮ್"** ಎಂದು ಹೇಳಿರುವುದರಿಂದ ನಾಲಕ್ಕು ವಿಧಗಳ ಕುಲದವರನ್ನು ಹುಟ್ಟಿಸಿದ್ದಾನೆಂದು ಹೇಳಬಹುದು. ವರ್ಣ ಎಂದರೇ ಬಣ್ಣ, ಕುಲ, ಜಾತಿ, ಬೇರೆಯಾಗಿ ಕಾಣಿಸುವುದು ಎಂದು ವಿವಿಧ ಅರ್ಥಗಳನ್ನು ತೆಗೆದುಕೊಂಡು ನೋಡಿದರೇ ಮನುಷ್ಯರಲ್ಲಿ ಮುಖ್ಯವಾಗಿ ನಾಲ್ಕು ಕುಲಗಳು ಕಾಣಿಸುತ್ತಿರುವ ಮಾತು ಎಲ್ಲರಿಗೂ ತಿಳಿದಿದೆ. **"ಗುಣಕರ್ಮ ವಿಭಾಗಶಃ"** ಎಂದಿದ್ದಾರೆ ಆದಕಾರಣ ಈ ನಾಲಕ್ಕು ಕುಲದವರಿಗೆ ನಾಲಕ್ಕು ಕೆಲಸಗಳು ಇವೆಯೆಂದು ಹೇಳಬಹುದು. "ಬ್ರಾಹ್ಮಣರು ಉಳಿದ ಮೂರು ಕುಲದವರಿಗೆ ದೊಡ್ಡದಾಗಿದ್ದೂ ಬ್ರಾಹ್ಮಣತ್ವ ಮಾಡುವುದು, ಪುರೋಹಿತ ಮಾಡುವುದನ್ನೇ ಕೆಲಸವಾಗಿ ಇಟ್ಟುಕೊಳ್ಳುವುದು, ಕ್ಷತ್ರಿಯರು ರಾಜ್ಯವನ್ನು ಪಾಲಿಸುವುದೂ, ವೈಶ್ಯರು ವ್ಯಾಪಾರ ಮಾಡುವುದು, ಶೂದ್ರರು ತಮಗಿಂತಲೂ ಮೊದಲು ಹುಟ್ಟಿರುವ ಮೂರು ಕುಲದವರಿಗೆ ಸೇವೆ ಮಾಡುವುದು ಅದೇ ಕೆಲಸವಾಗಿ ಇಟ್ಟುಕೊಳ್ಳಬೇಕು.

ಈ ವಿಧವಾಗಿ ನಾಲಕ್ಕು ಕುಲಗಳಿಗೆ ನಾಲಕ್ಕು ಕೆಲಸಗಳು ಸ್ವಧರ್ಮಗಳಾಗಿ ಇವೆ" ಎಂದು ಹೇಳಿದ್ದಾರೆ.

ಹತ್ತುಜನ ಗುಂಪಿರುವವರ ಗುರು ಮೇಲಿನ ವಿಷಯವನ್ನು ಹೇಳಿರುವಾಗ ಅದು ಎಲ್ಲಾ ವಿಧಗಳಾಗಿ ಶಾಸ್ತ್ರಕ್ಕೆ ಸಂಬಂಧವಿಲ್ಲದೇ ಇತ್ತು. ಕೆಲವು ದಿನಗಳ ನಂತರ ಅದೇ ವಿಷಯವನ್ನೇ ಹದಿನೈದುಜನ ಗುಂಪಿರುವವರಿಗೆ ಅವರ ಗುರು ಅದೇ ಶ್ಲೋಕವನ್ನು ಕುರಿತು ಶಾಸ್ತ್ರಬದ್ಧವಾಗಿಯೇ ಹೇಳುವನು. ಆದರೇ ಅದರಲ್ಲಿ ಕೆಲವರಿಗೆ ಅಶಾಸ್ತ್ರಬದ್ಧವಾದ ಸಮಾಚಾರವೇ ಹೇಳಿದನು. ಅದು ಯಾವ ವಿಧವಾಗಿ ನಡೆದಿದೆಯೋ ವಿವರಿಸಿಕೊಳ್ಳೋಣ. ಗುರುಗಳು ಹೇಳಿರುವ ವಿವರದಲ್ಲಿ ನಾಲಕ್ಕು ವರ್ಣಗಳನ್ನು ನಾಲಕ್ಕು ಜಾತಿಗಳೆಂದು ಹೇಳಿದಾಗ ಕೇಳುವವರು ಬುದ್ಧಿಗೆ ಮನುಷ್ಯರ ಶರೀರಗಳ ಜನ್ಮವನ್ನು ಅನುಸರಿಸಿ ನಾಲ್ಕು ಜಾತಿಗಳಾಗಿ ಇದ್ದಾರೆಂದು ಅರ್ಥವಾಗಿದೆ. ಶ್ಲೋಕದಲ್ಲಿ **"ಚಾತುರ್ವರ್ಣ್ಯಂ ಗುಣಕರ್ಮ ವಿಭಾಗಶಃ"** ಎಂದು ಇರುವುದರಿಂದ ನಾಲಕ್ಕು ವಿಧಗಳ ಜಾತಿಗಳ ಹೆಸರುಗಳು ಶ್ಲೋಕದಲ್ಲಿ ಇಲ್ಲ. **"ಗುಣಕರ್ಮಗಳನ್ನು ಅನುಸರಿಸಿ ನಾಲಕ್ಕು ವಿಧಗಳ ಮನುಷ್ಯರನ್ನು ಸೃಷ್ಟಿಸಿದ್ದೇನೆ"** ಎಂಬ ಮಾತಿನಲ್ಲಿ ಗುಣಕರ್ಮಗಳೆಂಬ ಮಾತನ್ನು ಪೂರ್ತಿಯಾಗಿ ಬಿಟ್ಟುಹಾಕಿರುವವರು, ನಾಲಕ್ಕು ವಿಧಗಳ ಜಾತಿಗಳನ್ನೇ ಜ್ಞಾಪಕವಿಟ್ಟುಕೊಂಡಿದ್ದಾರೆ. ಶ್ಲೋಕದಲ್ಲಿ ಸ್ವಲ್ಪಮಟ್ಟಿನ ಸೂತ್ರವನ್ನು ಹೇಳಿದ್ದಾರೆ. ಅಷ್ಟೇಹೊರತು ಆ ನಾಲಕ್ಕು ವರ್ಣಗಳ ಹೆಸರುಗಳು ಅಲ್ಲಿ ಹೇಳಲಿಲ್ಲ. ಆದ್ದರಿಂದ ಶ್ಲೋಕವನ್ನು ಕೇಳಿರುವವರೇ ಆ ವರ್ಣಗಳನ್ನು ಕುರಿತು ಅರ್ಥಮಾಡಿಕೊಳ್ಳಬೇಕಾಗಿದೆ. ಇಲ್ಲದೆ ಹೋದರೇ ಶ್ಲೋಕವನ್ನು ವಿವರಿಸಿ ಹೇಳುವವರಾದರೂ! ನಾಲಕ್ಕು ವರ್ಣಗಳನ್ನು ಕುರಿತು ಹೇಳಬೇಕಾಗಿದೆ. ಆದರೇ ಗುರುಗಳು ಶ್ಲೋಕದಲ್ಲಿ ಎಷ್ಟು ಇದೆಯೋ ಅಷ್ಟುರವರೆಗೇ ಹೇಳಿ ಬಿಟ್ಟುಹಾಕಿದ್ದಾರೆ. ಆ ವಿಷಯವನ್ನು ಕೇಳಿದ ಗುಂಪಿನಲ್ಲಿ ಕೆಲವರು ಅವರ ಬುದ್ಧಿಗೆ, ಮನುಷ್ಯರ ಶರೀರಗಳ ಜನ್ಮಗಳನ್ನು ಅನುಸರಿಸಿ ಅಥವಾ ಶರೀರ ಆಕಾರಗಳನ್ನು ಅನುಸರಿಸಿ ನಾಲಕ್ಕು ವಿಧಗಳಾಗಿ ಹೇಳಿಕೊಳ್ಳಬಹುದೆಂದು, ಆ ನಾಲಕ್ಕು ವಿಧಗಳವರಲ್ಲಿ ಒಂದು ಕಪ್ಪನೆಯ ನೀಗ್ರೋಜಾತಿ ಮನುಷ್ಯರೆಂದೂ, ಎರಡನೆಯ ವಿಧದವರು ಕುಳ್ಳಗಿರುವ ಚೈನಾ, ಜಪಾನ್ ಮನುಷ್ಯರೆಂದೂ,

ಮೂರನೆಯ ಜಾತಿಯವರು ಬೆಳ್ಳಗೆ ಉದ್ದವಾಗಿ ಕೋಲು ಮುಖವಾಗಿರುವ ಅಮೆರಿಕಾ, ಇಂಗ್ಲಾಂಡ್ ದೇಶದವರು, ನಾಲಕ್ಕನೆಯ ಜಾತಿಯವರಾಗಿ ಕುಳ್ಳ, ಉದ್ದ, ಕಪ್ಪು, ಬಿಳುಪು ಎಲ್ಲಾ ಬೆರೆತಿರುವ ಭಾರತದೇಶದವರೆಂದು, ನಾಲಕ್ಕು ವಿಧಗಳ ಪ್ರಜೆಗಳನ್ನು ಹೇಳಿಕೊಳ್ಳುವುದು ನಡೆದಿದೆ. ಅವರಲ್ಲಿ ಐದುಜನ ಮನುಷ್ಯರ ಶರೀರಗಳ ಆಕೃತಿಯನ್ನು ಅನುಸರಿಸಿ ನಾಲ್ಕು ವಿಧಗಳ ಮನುಷ್ಯರೆಂದು ಅವರ ಬುದ್ಧಿಗೆ ಅರ್ಥಮಾಡಿಕೊಂಡರೇ, ಅದೇ ಗುಂಪಿನಲ್ಲಿ ಉಳಿದ ಹತ್ತುಜನ ಬುದ್ಧಿಗೆ ಮತ್ತೊಂದು ವಿಧವಾಗಿ ಅರ್ಥವಾಗಿದೆ. ಅವರಿಗೆ ಅರ್ಥವಾಗಿರುವುದನ್ನು ಅನುಸರಿಸಿ ಪ್ರಪಂಚ ವಿಷಯದಲ್ಲಿ ನೀತಿ ಇರುವವರು, ನೀತಿ ಇಲ್ಲದವರು, ಪರಮಾತ್ಮ ವಿಷಯದಲ್ಲಿ ಜ್ಞಾನಿಗಳು, ಅಜ್ಞಾನಿಗಳೆಂದು ನಾಲಕ್ಕು ವಿಧಗಳ ಮನುಷ್ಯರಿದ್ದಾರೆಂದು ಕೊಳ್ಳುವುದು ನಡೆದಿದೆ.

ಇನ್ನು ಮೂರನೆಯ ಗುಂಪಿನವರಾದ ಐದುಜನ ಸ್ವತಃವಾಗಿ ದೈವಗ್ರಂಥಗಳನ್ನು ಓದುತ್ತಾ ಮನುಷ್ಯರ ಮಾತುಗಳಿಗೆ ದೂರವಾಗಿದ್ದು, ದೈವಗ್ರಂಥದಲ್ಲಿ ಹೇಳಿರುವುದನ್ನು ಸಂಪೂರ್ಣವಾಗಿ ಅರ್ಥ ಮಾಡಿಕೊಳ್ಳುತ್ತಿದ್ದರು. ಎಲ್ಲಾದರೂ ಸಂಶಯವಿರುವುದಾದರೇ ಗುರು ಎಂದಾಗಲೀ, ಬೋಧಕ ನೆಂದಾಗಲೀ ಹೇಳಿಕೊಳ್ಳದ ಒಬ್ಬ ಮೇಧಾವಿಯನ್ನು ಕೇಳಿ ತಿಳಿದುಕೊಳ್ಳುತ್ತಿದ್ದರು. ಆ ಮೇಧಾವಿ ಮಾತಗಳಿಗೆ ಅತೀತವಾಗಿ ಇರುವವನಾಗಿ ಶಾಸ್ತ್ರಬದ್ಧವಾದ ವಿವರವನ್ನೇ ಹೇಳುತ್ತಿದ್ದನು. ಮತಗಳಿಗೆ ಅತೀತವಾಗಿರುವ ಮೂರನೆಯ ಗುಂಪಿನವರು ಮೂರು ಮತ ಗ್ರಂಥಗಳನ್ನು ಸಮಾನವಾಗಿ ನೋಡುತ್ತಾ, ಅವುಗಳಲ್ಲಿನ ಭಾವನೆಯನ್ನು ಶಾಸ್ತ್ರಯುತವಾಗಿ ಅರ್ಥಮಾಡಿ ಕೊಳ್ಳುತ್ತಿದ್ದರು. ಭಗವದ್ಗೀತೆಯಲ್ಲಿನ ಜ್ಞಾನಯೋಗ 13ನೇ ಶ್ಲೋಕದಲ್ಲಿರುವ ನಾಲಕ್ಕು ವರ್ಣಗಳನ್ನು ಗುರುತಿಸುವುದರಲ್ಲಿ, ಅದೇ ಶ್ಲೋಕದಲ್ಲಿ ಹೇಳಿರುವ ಗುಣಕರ್ಮಗಳನ್ನು ಆಧಾರ ಮಾಡಿಕೊಂಡು, ಜೀವಿಯು ಮಾಡುವ ಕೆಲಸಗಳನ್ನು ಅನುಸರಿಸಿ ಗುಣಗಳನ್ನು ಆತನಿರುವ ಗುಣಗಳನ್ನು ಅನುಸರಿಸಿ ಜೀವಿಗಳನ್ನು **ತಾಮಸರು, ರಾಜಸರು, ಸಾತ್ವಿಕರು, ಯೋಗಿಗಳು** ಎಂದು ನಾಲಕ್ಕು ವಿಧಗಳಾಗಿ ವಿಂಗಡಿಸಿಕೊಂಡಿದ್ದಾರೆ.

ಮೂರು ಗುಂಪುಗಳಲ್ಲಿ ಹತ್ತುಜನರಿರುವ ಮೊದಲ ಗುಂಪು ನಾಲ್ಕು ಕುಲಗಳ ಮನುಷ್ಯರನ್ನು ಬ್ರಾಹ್ಮಣರು, ವೈಶ್ಯರು, ಕ್ಷತ್ರಿಯರು, ಶೂದ್ರರು ಎಂದು ಹೊರಗಿನ ಮನುಷ್ಯರ ಕುಲಗಳನ್ನು ಹೇಳಿಕೊಂಡರೇ, ಎರಡನೆಯ ಗುಂಪಿನಲ್ಲಿನ ಹದಿನೈದು ಜನರಲ್ಲಿ ಕೆಲವರಿಗೆ ಹೊರಗಿನ ಶರೀರ ಹೋಲಿಕೆಗಳನ್ನು ಅನುಸರಿಸಿ ಕಪ್ಪುಜಾತಿ, ಬಿಳಿಜಾತಿ, ಕುಳ್ಳಜಾತಿ, ಮಿಶ್ರಣಜಾತಿ ಶರೀರದವರೆಂದು ನಾಲಕ್ಕು ವಿಧಗಳ ಮನುಷ್ಯರಾಗಿ ಗುರುತಿಸಿದ್ದಾರೆ. ನಂತರ ಮೂರನೆಯ ಗುಂಪಿನಲ್ಲಿನ ಐದುಜನ ಶರೀರದ ಒಳಗಿರುವ ಗುಣಗಳನ್ನು ಅನುಸರಿಸಿ ಶರೀರದೊಳಗೆ ನಿವಾಸಿಸುವ ಜೀವಿಗಳನ್ನು ನಾಲಕ್ಕು ವಿಧಗಳು ವಿಂಗಡಿಸಿ ತಾಮಸರು, ರಾಜಸರು, ಸಾತ್ವಿಕರು, ಯೋಗಿಗಳು ಎಂಬ ನಾಲಕ್ಕು ವಿಧಗಳಾಗಿ ಹೇಳಿದ್ದಾರೆ. ಈ ಮೂರು ಗುಂಪುಗಳವರು ಮೂರು ವಿಧಗಳಾಗಿ ಹೇಳುವುದೇ ಅಲ್ಲದೇ ಯಾರು ಹೇಳಿರುವುದನ್ನು ಅವರು ದೃಢವಾಗಿ ಸಮ್ಮತಿಸಿ ಹೇಳುತ್ತಿದ್ದಾರೆ. ಭಗವದ್ಗೀತೆಯಲ್ಲಿ ಹೇಳಿರುವುದು ಒಂದೇ ವಿಷಯವೇ! ಆದರೇ ಅದು ಮನುಷ್ಯರ ಬಳಿಗೆ ಸೇರುವಷ್ಟರೊಳಗೆ ಮೂರು ವಿಧಗಳಾಗಿ ಬದಲಾಗಿ ಹೋಗಿದೆ. ಭಗವದ್ಗೀತೆಯಲ್ಲಿ ಹೇಳಿರುವವನು ಒಬ್ಬನೇ, ಹೇಳಲ್ಪಟ್ಟಿರುವ ವಿಷಯ ಒಂದೇ ಆಗಿರುವಾಗ ಮನುಷ್ಯರು ಅರ್ಥಮಾಡಿಕೊಂಡಿರುವುದು ನಾಲಕ್ಕು ವಿಧಗಳು. ಒಂದೇ ಸಮಾಚಾರವು ನಾಲಕ್ಕು ವಿಧಗಳಲ್ಲಿ ಏಕೆ ಅರ್ಥವಾಗಿದೆಯೋ ಯೋಚಿಸಿದರೇ ಹೇಳುವ ಬೋಧಕನ ಬಳಿಯಾದರೂ ಭಾವನೆ ಬದಲಾಗಿರಬಹುದು. ಕೇಳುವ ಕಿವಿಗೆ ಸರಿಯಾಗಿ ಕೇಳಿಸದೆ ಹೋಗಿರಬಹುದು. ಮೂರನೆಯದು ಹೊರಗಿನಿಂದ ಒಳಗೆ ಗ್ರಹಿಸುವ ಮನಸ್ಸು ಗ್ರಹಿಸಿಕೊಳ್ಳುವುದರಲ್ಲಾದರೂ ವ್ಯತ್ಯಾಸ ಇರಬಹುದು. ಕೊನೆಗೆ ಮನಸ್ಸು ತಿಳಿಸಿದ್ದನ್ನು ಬುದ್ಧಿ ಗ್ರಹಿಸಿಕೊಳ್ಳುವುದರಲ್ಲಾದರೂ ವ್ಯತ್ಯಾಸ ಆಗಿರಬಹುದು.

ಒಂದು ಸಮಾಚಾರವು ಶರೀರದಲ್ಲಿ ಬುದ್ಧಿವರೆಗು ಸೇರುವುದರೊಳಗೆ ನಾಲಕ್ಕು ಕಡೆಗಳಲ್ಲಿ ಭಾವನೆ ಬದಲಾಗುವ ಅವಕಾಶವಿರುವುದು. ನೋಡಿದರೇ ಭಗವದ್ಗೀತೆಯಲ್ಲಿನ ಒಂದು ಶ್ಲೋಕದಲ್ಲಿರುವ ಒಂದು ಭಾವನೆಯು ಮೂರು

ಗುಂಪುಗಳ ಮನುಷ್ಯರ ಬಳಿಗೆ ಸೇರುವುದರೊಳಗೆ ನಾಲಕ್ಕು ವಿಧಗಳ ಭಾವನೆಗಳಾಗಿ ಬದಲಾಗಿ ಹೋಗಿದೆ. ಒಂದೇ ಗುಂಪಿನಲ್ಲಿನ ಕೆಲವರಿಗೆ ಒಂದು ವಿಧವಾಗಿ, ಮತ್ತೆ ಕೆಲವರಿಗೆ ಮತ್ತೊಂದು ವಿಧವಾಗಿ ಅರ್ಥವಾಗಿದೆ. ಒಂದೇ ಮತದಲ್ಲಿ ಇರುವವರಿಗೆ ಅವರ ಮತಕ್ಕೇ ಎಂದು ಹೇಳಲ್ಪಡುತ್ತಿರುವ ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಒಂದು ಶ್ಲೋಕದಲ್ಲಿ ಒಂದೇ ಮತದವರಾದ ಹಿಂದೂಗಳಲ್ಲಿಯೇ ಇಷ್ಟು ಭೇದಾಭಿಪ್ರಾಯಗಳಿರುವಾಗ ಉಳಿದ ಭಗವದ್ಗೀತೆ ಸುಮಾರು ಏಳುನೂರು ಶ್ಲೋಕಗಳು ಎಲ್ಲರಿಗೂ ಸಕ್ರಮವಾಗಿ ಸರಿಯಾದ ಅರ್ಥದಲ್ಲಿ ತಿಳಿದಿರುತ್ತದೆ ಎಂಬ ನಂಬಿಕೆಯಿಲ್ಲ. ಒಂದು ಶ್ಲೋಕದಲ್ಲಿಯೇ ನಾಲಕ್ಕು ವಿಧಗಳ ಭೇದಾಭಿಪ್ರಾಯಗಳಿರುವಾಗ ಉಳಿದ ಭಗವದ್ಗೀತೆ ಸುಮಾರು ಏಳುನೂರು ಶ್ಲೋಕಗಳು ಎಲ್ಲರಿಗೂ ಸರಿಯಾದ ಅರ್ಥದಿಂದ ತಿಳಿದಿರುತ್ತದೆಂಬ ನಂಬಿಕೆಯಿಲ್ಲ. ಒಂದು ಶ್ಲೋಕದಲ್ಲಿಯೇ ನಾಲ್ಕುವಿಧಗಳ ಬೇದಾಭೀಪ್ರಾಯ ಗಳಿರುವಾಗ ಮನುಷ್ಯರಿಗೆ ಉಳಿದ ಭಗವದ್ಗೀತೆ ಎಲ್ಲವೂ ಒಂದೇ ವಿಧವಾಗಿ ಅರ್ಥವಾಗಿರುತ್ತದೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಒಂದೇ ಮತದಲ್ಲಿಯೇ ಭೇದಾಭಿಪ್ರಾಯಗಳಿರುವಾಗ ಉಳಿದ ದೈವಗ್ರಂಥಗಳಲ್ಲಿನ ಒಂದೇ ವಿಷಯದ ಮೇಲೆ ಒಂದೊಂದು ಮತವು ಒಂದೊಂದು ಅಭಿಪ್ರಾಯ ಹೊಂದಿರುವುದರಲ್ಲಿ ಆಶ್ಚರ್ಯವಿಲ್ಲ. ಭಗವದ್ಗೀತೆಯಲ್ಲಿನ ಶ್ಲೋಕದಲ್ಲಿ ಒಂದೇ ಭಾವನೆಯಿರುವಂತೆ ಉಳಿದ ಎರಡು ದೈವಗ್ರಂಥಗಳಾದ 'ಬೈಬಲ್ ಖುರಾನ್ ಗ್ರಂಥಗಳಲ್ಲಿ ಭಗವದ್ಗೀತೆಯಲ್ಲಿನ ಒಂದೇ ಜ್ಞಾನವೇ ಒಳಗೊಂಡಿದೆ. ಸಾವುಹುಟ್ಟುಗಳನ್ನು ಕುರಿತು ಭಗವದ್ಗೀತೆಯಲ್ಲಿ ಹೇಳಿರುವ ವಿಷಯವೇ ಉಳಿದ ಗ್ರಂಥಗಳಲ್ಲಿ ಸಹ ಇದೆ. ಭಗವದ್ಗೀತೆಯಲ್ಲಿ ಹೇಳಿರುವ ಮೂವರು ಪುರುಷರ ವಿಷಯವೇ ಉಳಿದ ಬೈಬಲ್, ಖುರಾನ್ ಗ್ರಂಥಗಳಲ್ಲಿ ಸಹ ಇದೆ ಈ ವಿಧವಾಗಿ ಒಂದೇ ವಿಷಯವು ಮೂರು ಗ್ರಂಥಗಳಲ್ಲಿ ಒಂದೇ ಭಾವನೆಯಿಂದ ಇದೆ, ಆದರೂ ಮನುಷ್ಯರು ಆ ವಿಷಯವನ್ನು ತಿಳಿಯಲಾರದೆ ಹೋಗಿದ್ದಾರೆ.

ಸೃಷ್ಠಿ ಆದಿಯಲ್ಲಿ ದೇವರು ಮಾನವರಿಗಾಗಿ ದೈವಜ್ಞಾನವನ್ನು ಶಬ್ಧರೂಪವಾಗಿ ತಿಳಿಸಿದ್ದಾನೆ. ಅದನ್ನೇ ವಾಣಿ (ವಹೀ) ಎಂದು ಹೇಳಿದ್ದಾರೆ.

ಮೊದಲು ಗ್ರಂಥರೂಪದಲ್ಲಿ ಇಲ್ಲದ ದೈವಜ್ಞಾನವು ಶಬ್ಧರೂಪವಾಗಿ ಬಂದಿದ್ದು **"ಜಪರ"** ಎಂಬ ಹೆಸರು ಹೊಂದಿತ್ತು. "ಜಪರ" ಎಂದರೇ ಹುಟ್ಟಿರುವುದಕ್ಕಿಂತಲೂ ಬೇರೆಯಾಗಿ ಇದೆಯೆಂದು ಅರ್ಥ. ಎಂದರೇ ಪ್ರಕೃತಿಗಿಂತಲೂ ಬೇರೆಯಾದುದೆಂದು ಅರ್ಥ. ಹಾಗೆ ಜಪರವಾಗಿದ್ದ ಜ್ಞಾನವು ಮೊದಲು ಸುಮಾರು ಐದುಸಾವಿರ ವರ್ಷಗಳ ಪೂರ್ವವು ಭಾರತದೇಶದಲ್ಲಿ **"ಭಗವದ್ಗೀತೆ"** ಎಂಬ ಗ್ರಂಥರೂಪವಾಗಿದೆ. ಅದೇ ಪಶ್ಚಿಮ ದೇಶಗಳಲ್ಲಿ **"ತೌರಾತ್"** ಗ್ರಂಥವಾಗಿ ಬರೆಯಲ್ಪಟ್ಟಿದೆ. ಭಗವದ್ಗೀತೆ ಎಂದರೂ ತೌರಾತ್ ಎಂದರೂ ಎರಡೂ ಒಂದೇ ಗ್ರಂಥವಾಗಿ ಲೆಕ್ಕಿಸಬೇಕು. ಸ್ವಲ್ಪಕಾಲಕ್ಕೆ ಭಗವದ್ಗೀತೆ ಅಥವಾ ತೌರಾತ್ ಗ್ರಂಥದಲ್ಲಿನ ಜ್ಞಾನವೇ ಉಳಿದ ಎರಡು ಗ್ರಂಥಗಳಾಗಿ ಬದಲಾಗಿಹೋಗಿದೆ. ಮೊದಲ ಗ್ರಂಥ ಭಗವದ್ಗೀತೆ ಅಥವಾ ತೌರಾತ್ ಹಾಗೆಯೇ ಇರುವಾಗ, ಅದರಲ್ಲಿನ ಜ್ಞಾನವೇ ಇಂಜೀಲು, ಖುರಾನ್ ಗ್ರಂಥಗಳಾಗಿ ಬದಲಾಗಿಹೋಗಿದೆ. ಇಂಜೀಲು, ಖುರಾನ್ ಗ್ರಂಥಗಳ ಜ್ಞಾನವು ತೌರಾತ್ ಗ್ರಂಥದಲ್ಲಿನ ಜ್ಞಾನವನ್ನು ದೃಢಪಡಿಸುತ್ತಿದೆಯೆಂದು ಖುರಾನ್ ಗ್ರಂಥದಲ್ಲಿ ಐದನೇ ಸೂರಾದಲ್ಲಿ ಬಹಳಕಡೆ ಹೇಳಲ್ಪಟ್ಟಿದೆ. ಇದನ್ನನುಸರಿಸಿ ಭಗವದ್ಗೀತೆಯಲ್ಲಿನ ಒಂದು ಜ್ಞಾನವೇ ಉಳಿದ ಎರಡು ಗ್ರಂಥಗಳಲ್ಲಿ ಇದೆಯೆಂದು ತಿಳಿದುಹೋಗಿದೆ. ಈದಿನ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳು ಮೂರು, ಮೂರು ಮತಗ್ರಂಥಗಳಾಗಿ ಪ್ರಜೆಗಳು ಹೇಳಿಕೊಳ್ಳುತ್ತಿದ್ದರೂ ಮೂರರಲ್ಲೂ ಒಂದೇ ಜ್ಞಾನವಿದೆಯೆಂದು, ಒಂದೇ ದೇವರನ್ನು ಕುರಿತು ಹೇಳಿದೆಯೆಂದು ಹೇಳಿಕೊಳ್ಳಲಾರದೆ ಹೋಗುತ್ತಿದ್ದಾರೆ. ಮೇಲಾಗಿ ನಮ್ಮ ಗ್ರಂಥ ಬೇರೆ, ನಮ್ಮ ಜ್ಞಾನ ಬೇರೆ, ನಮ್ಮ ದೇವರು ಬೇರೆ ಎನ್ನುತ್ತಿದ್ದಾರೆ. ಮೂರು ಗ್ರಂಥಗಳಲ್ಲಿ ಇರುವ ಒಂದೇ ವಿಷಯದ ಮೇಲೆ ಒಂದೊಂದು ಮತದವರು, ಒಂದೊಂದು ಅಭಿಪ್ರಾಯ ಹೊಂದಿರುವುದರಿಂದ ಮತ, ಮತಕ್ಕೂ ಮಧ್ಯ ಭೇದವು ಹುಟ್ಟಿಕೊಂಡು ಬರುತ್ತಿದೆ. ಹಾಗೆಯೇ ಮನುಷ್ಯ ಮತವನ್ನು ಅವಲಂಭಿಸುವುದರಿಂದ, ಒಂದು ಮತದವರು ಏನು ಹೇಳಿದರೇ ಆ ಮತದಲ್ಲಿನ ಉಳಿದವರೆಲ್ಲರೂ ಅದೇ ಮಾತನ್ನು ಮಾತನಾಡುತ್ತಿದ್ದಾರೆ. ಹಾಗೆ ಮತನಾಡುವುದರಿಂದ ಮತಗಳ ಮಧ್ಯ ಸಾಮರಸ್ಯ ಹೋಗಿ

ಭೇದಾಭಿಪ್ರಾಯಗಳು ಉಂಟಾಗಿ, ಕೊನೆಗೆ ಭೇದಗಳು ಅಸೂಯೆಯಾಗಿ ಬದಲಾಗುತ್ತಿವೆ. ಅಗಲೇ ಮತಕ್ಕು, ಮತಕ್ಕು ಮಧ್ಯ ಮತದ್ವೇಷ ಏರ್ಪಡುತ್ತಿದೆ. ಮತದ್ವೇಷಗಳು ನಿಧಾನವಾಗಿ ಮೊದಲಾಗಿ ಕೊನೆಗೆ ಅದು ದೊಡ್ಡದಾಗಿ ಯುದ್ಧಗಳವರೆಗು ದಾರಿಮಾಡುತ್ತಿದೆ. ದ್ವೇಷ ಬೆಳೆದುಹೋಗಿ ಶತ್ರುತ್ವವಾಗಿ ಬದಲಾಗಿಹೋಗುವುದರಿಂದ ಒಬ್ಬರಿಗೊಬ್ಬರು ದಾಳಿಮಾಡಿಕೊಂಡು ಹಿಂಸಿಸಿಕೊಳ್ಳುವುದು ನಡೆಯುತ್ತಿದೆ.

ಮತದ್ವೇಷ ಇಲ್ಲದೇ ಹೋಗಬೇಕೆಂದರೇ ಒಬ್ಬರಿಗೆ ಅರ್ಥವಾದ ವಿಷಯವೇ ಮತ್ತೊಬ್ಬರಿಗೆ ಅರ್ಥವಾಗಬೇಕು. ಅರ್ಥವಾದ ವಿಷಯವು ಎಂದಿಗೂ ಅಸತ್ಯವಾಗದೇ ಇರಬೇಕೆಂದರೇ, ಅದು ಶಾಸ್ತ್ರಬದ್ಧವಾದ ವಿಷಯವಾಗಿರಬೇಕು. ಶಾಸ್ತ್ರ ಎಂದರೇ! ಶಾಸನದೊಂದಿಗೆ ಕೂಡಿಕೊಂಡಿರುವ ಸತ್ಯವಾಗಿ ಇರುವುದೆಂದು ಅರ್ಥ. ಒಂದೇ ಮಾತಿನಲ್ಲಿ ಹೇಳಬೇಕೆಂದರೇ ಯಾವುದು ಸತ್ಯವೋ ಅದೇ ಶಾಸ್ತ್ರವು, ಯಾವುದು ಶಾಸ್ತ್ರವೋ ಅದೇ ಸತ್ಯ. ಭಗವದ್ಗೀತೆಯಲ್ಲಿನ ಪ್ರತಿ ವಿಷಯವು ಶಾಸ್ತ್ರದೊಂದಿಗೆ ಕೂಡಿಕೊಂಡಿರುವುದನ್ನೇ ಭಗವಂತನು ಹೇಳುವುದು ನಡೆದಿದೆ. ಮಾತುಗಳ ರೂಪದಲ್ಲಿ ಹೇಳಲ್ಪಟ್ಟಿರುವ ಭಗವದ್ಗೀತೆ ಬರಹ ರೂಪದಲ್ಲಿ ಬಂದಾಗ, ಸ್ವಲ್ಪ ಭಾವನೆ ಬದಲಾಗಿ ಹೋಗಿ ದೇವರು ಹೇಳದ ವಿಷಯಗಳು ಸಹ ಗ್ರಂಥದಲ್ಲಿ ಬರೆಯಲ್ಪಟ್ಟಿವೆ. ಮೊದಲು ಗ್ರಂಥವನ್ನು ವ್ಯಾಸನು ಬರೆದಾಗ ಅದರಲ್ಲಿ ಸ್ವಚ್ಛವಾದ ಸಮಾಚಾರವೇ ಬರೆಯಲಾಗಿದ್ದರೂ, ವ್ಯಾಸನು ಹೋದ ನಂತರ ಭಗವದ್ಗೀತೆಯಲ್ಲಿ ಕೆಲವು ಪಕ್ಕದ ಭಾವನೆಗಳು ಸೇರಿಸಲ್ಪಟ್ಟಿವೆ. ಮನುಷ್ಯರು ಹೇಳಿರುವ ವಿಷಯಗಳು ಭಗವದ್ಗೀತೆಯಲ್ಲಿ ಸುಲಭವಾಗಿ ಹೊರಗೆ ಕಾಣಿಸುವು ದರಿಂದ ನಾವು ಅವುಗಳನ್ನು ಕಲ್ಪಿತ ಶ್ಲೋಕಗಳೆಂದು ಹೇಳುವುದು ನಡೆದಿದೆ. ಮನುಷ್ಯರು ಬರೆದ ವಿಷಯಗಳಲ್ಲಿ ಶಾಸ್ತ್ರಬದ್ಧತೆ ಇಲ್ಲದಿರುವುದರಿಂದ ಅವು ಹೇತುಬದ್ಧವಲ್ಲದ ವಿಷಯಗಳಾಗಿ ಕಾಣಿಸುತ್ತಿವೆ. ಅವುಗಳಿಂದ ಮನುಷ್ಯರು ಅಜ್ಞಾನಮಾರ್ಗ ಹಿಡಿಯುವ ಅವಕಾಶವಿದೆ. ಆದ್ದರಿಂದ ನಾವು ಬರೆದಿರುವ **"ತ್ರೈತ ಸಿದ್ಧಾಂತ ಭಗವದ್ಗೀತೆ"** ಗ್ರಂಥದಲ್ಲಿ ಇವು ಕಾಲುಷ್ಯದ ಶ್ಲೋಕಗಳೆಂದು ಹೇಳಿದ್ದೇವೆ.

ಭಗವದ್ಗೀತೆಯನ್ನು ಅನುಸರಿಸಿ ಭಗವದ್ಗೀತೆ ನಂತರ ಮೂರು ಸಾವಿರ ವರ್ಷಗಳಿಗೆ ಇಂಜೀಲು ಗ್ರಂಥ ಹೇಳಲ್ಪಟ್ಟಿದೆ ಮತ್ತು ಬರೆಯಲ್ಪಟ್ಟಿದೆ. ಆ ನಂತರ ಆರುನೂರು ವರ್ಷಗಳಿಗೆ ಎಂದರೆ ಭಗವದ್ಗೀತೆ ನಂತರ 3600 ವರ್ಷಗಳಿಗೆ ಅಂತಿಮ ದೈವಗ್ರಂಥ ಖುರಾನ್ ಬರೆಯಲಾಗಿದೆ. ಇಲ್ಲಿಗೆ ಸುಮಾರು 1400 ವರ್ಷಗಳ ಪೂರ್ವವು ಬರೆಯಲಾದ ಖುರಾನ್ ಗ್ರಂಥದಲ್ಲಿಯೂ, ಇಂಜೀಲು ಗ್ರಂಥದಲ್ಲಿಯೂ ಭಗವದ್ಗೀತೆಯಲ್ಲಿ ದೇವರು ಹೇಳಿರುವ ಜ್ಞಾನವನ್ನೇ ಹೇಳಿರುವುದಾಗಿದೆ. ಆದರೇ ಭಗವದ್ಗೀತೆ ಕಲುಷಿತ ಶ್ಲೋಕಗಳಿಂದ ಕೂಡಿಕೊಂಡಿರುವ ಹಾಗೇ, ಉಳಿದ ಎರಡು ಗ್ರಂಥಗಳಲ್ಲಿ ಸಹ ಸ್ವಲ್ಪ ಕಲ್ಪಿತ ಬೋಧನೆಗಳಿವೆ ಎಂದು ತಿಳಿಯುತ್ತಿದೆ. ಎಲ್ಲಾದರೇ ಶಾಸ್ತ್ರಸಂಬಂಧ ಬೋಧನೆಗಳು ಇಲ್ಲವೋ ಅಲ್ಲಿ ಕಲ್ಪಿತ ಬೋಧನೆಗಳಿರುವಂತೆ ತಿಳಿಯುತ್ತಿದೆ. ಕಲ್ಪಿತ ಬೋಧನೆಗಳನ್ನು ಅನುಸರಿಸುವ ಮನುಷ್ಯರು ದೇವರು ಹೇಳಿರುವ ಜ್ಞಾನವನ್ನು ಅಲ್ಲದೇ ಮನುಷ್ಯರು ಹೇಳಿರುವ ಜ್ಞಾನವನ್ನು ಅರ್ಥಮಾಡಿಕೊಳ್ಳುವುದರಿಂದ, ಪೂರ್ತಿ ತಪ್ಪುದಾರಿಯಲ್ಲಿ ಹೋಗಿ ಅಜ್ಞಾನ ಅಂಧಕಾರದಲ್ಲಿ ಸಿಲುಕಿಕೊಳ್ಳಬೇಕಾಗಿ ಬರುತ್ತಿದೆ. ದೇವರು ಹೇಳಿರುವ ಸ್ವಚ್ಛವಾದ ಜ್ಞಾನವನ್ನು, ಶಾಸ್ತ್ರಬದ್ಧವಾದ ಜ್ಞಾನವನ್ನು ತಿಳಿಯುವುದರಲ್ಲಿಯೇ ಗ್ರಾಹಿತ ಶಕ್ತಿ ಬರವಾಗಿ ಹೋಗಿ, ಬೇರೆಬೇರೆ ಭಾವನೆಗಳೊಳಗೆ ಹೋಗುವ ಮನುಷ್ಯ ಕಲ್ಪಿತ ವಾಕ್ಯಗಳಲ್ಲಿ ಬಿದ್ದರೆ ಪೂರ್ತಿ ಅಜ್ಞಾನವಾಗಿ ಹೋಗುವುದು. ಆದ್ದರಿಂದ ನಮ್ಮ ಕೈಲಾದಷ್ಟರಮಟ್ಟಿಗೆ ನಾವು ಶಾಸ್ತ್ರಬದ್ಧವಾದ ವಿಷಯಗಳನ್ನೇ ಹೊರಗೆ ತಿಳಿಸುತ್ತಾ ಬರುತ್ತಿದ್ದೇವೆ.

ಭಗವದ್ಗೀತೆ ಎಲ್ಲಾ ಜ್ಞಾನಗಳಿಗೂ **"ಒರೆಗಲ್ಲು"** ಆಗಿದೆ. ಒರೆಗಲ್ಲಿನಿಂದ ಯಾವುದು ಬಂಗಾರವೋ, ಯಾವುದು ಬಂಗಾರವಲ್ಲವೋ ಗೀಚಿ ನೋಡಿದಹಾಗೆ ಭಗವದ್ಗೀತೆ ಒಂದರ ಜ್ಞಾನದಿಂದ ಉಳಿದ ಗ್ರಂಥಗಳಲ್ಲಿನ ದೈವಜ್ಞಾನವನ್ನು ಸುಲಭವಾಗಿ ಗ್ರಹಿಸಬಹುದು. ಆಗ ಮನುಷ್ಯನಿಗೆ ಕೆಲಸಕ್ಕೆ ಬಾರದ ಪ್ರಪಂಚ ವಿಷಯಗಳನ್ನು ಬಿಟ್ಟುಹಾಕಬಹುದು. ಶಾಸ್ತ್ರವನ್ನು ಅನುಸರಿಸುವುದರಿಂದ ಜ್ಞಾನದಲ್ಲಿ ಯಾವುದು ಸತ್ಯ, ಯಾವುದು ಅಸತ್ಯ ಎಂಬ ಮಾತು ತಿಳಿಯುವುದು.

ಪ್ರಪಂಚ ವಿಷಯಗಳಿಗೆ ಶಾಸ್ತ್ರಗಳು ಐದು ಇರುವಾಗ, ದೇವರ ವಿಷಯಕ್ಕೆ ಬ್ರಹ್ಮವಿದ್ಯೆ ಶಾಸ್ತ್ರವು ಒಂದೇ ಇದೆ. ಬ್ರಹ್ಮವಿದ್ಯಾ ಶಾಸ್ತ್ರವನ್ನು ಅನುಸರಿಸಿ ಉಳಿದ ದೈವಗ್ರಂಥಗಳಲ್ಲಿನ ವಿಷಯಗಳನ್ನು ನೋಡಬಹುದು. ಬ್ರಹ್ಮವಿದ್ಯಾ ಶಾಸ್ತ್ರವನ್ನು ಅನುಸರಿಸಿರುವ ವಿಷಯಗಳೆಲ್ಲವೂ ಸಕ್ರಮವಾದವೆಂದು, ಬ್ರಹ್ಮವಿದ್ಯಾ ಶಾಸ್ತ್ರ ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ಸಂಬಂಧವಿಲ್ಲದೆ ಇರುವ ವಿಷಯಗಳೆಲ್ಲಾ ಸರಿಯಾದ ಜ್ಞಾನ ಅಲ್ಲವೆಂದು ತಿಳಿಯಬಹುದು. ಒಂದೇ ವಿಷಯವು ಮೂರು ಗ್ರಂಥಗಳಲ್ಲಿ ಶಾಸ್ತ್ರಬದ್ಧವಾಗಿ ಹೇಳಿದ್ದರೂ, ಅವುಗಳನ್ನು ಮನುಷ್ಯನೊಂದು ಬುದ್ಧಿ ಗ್ರಹಿಸದೆ ಶಾಸ್ತ್ರಬದ್ಧವಾದುದನ್ನು ಸಹ ಶಾಸ್ತ್ರಬದ್ಧವಲ್ಲದ ವಿಷಯವಾಗಿ ತಿಳಿಯಬಹುದು. ಆಗ ಒಂದೇ ವಿಷಯದಲ್ಲಿ ಭೇದಬರುವುದು ಸಹಜ. ಪುನರ್ಜನ್ಮಗಳ ವಿಷಯದಲ್ಲಿ ಭಗವದ್ಗೀತೆಯಲ್ಲಿಯೂ, ಕೊನೆಯ ಗ್ರಂಥವಾದ ಖುರಾನ್‌ನಲ್ಲಿಯೂ ಹೆಚ್ಚಾಗಿ ಹೇಳಿದ್ದಾನೆ. ಮಧ್ಯಮ ದೈವಗ್ರಂಥದಲ್ಲಿ ಪುನರ್ಜನ್ಮ ವಿಷಯವಿದ್ದರೂ ಅದನ್ನು ಹೆಚ್ಚಾಗಿ ಹೇಳಲಿಲ್ಲ. ಕೊನೆಯ ದೈವಗ್ರಂಥದಲ್ಲಿ ಭಗವದ್ಗೀತೆಯಲ್ಲಿ ಹೇಳಿರುವು ದಕ್ಕಿಂತಲು ಹೆಚ್ಚಾಗಿ ಪುನರ್ಜನ್ಮವನ್ನು ಕುರಿತು ಹೇಳಿರುವುದಾಗಿದೆ. ಭಗವದ್ಗೀತೆ ಯಲ್ಲಿ ಪುನರ್ಜನ್ಮ ವಿಷಯವಾಗಿ ಒಂದುಕಡೆ ಮರಣಿಸಿದವನು ಜನ್ಮಿಸದೆ ತಪ್ಪುವುದಿಲ್ಲವೆಂದು ಹೇಳಿರುವ ವಿಷಯವನ್ನೇ ನಂತರ ಸೂಚನೆಯಾಗಿ ಮೂರುಬಾರಿ ಹೇಳುವುದು ನಡೆದಿದೆ. ಅದೇ ಪುನರ್ಜನ್ಮ ವಿಷಯವನ್ನೇ ಖುರಾನ್ ಗ್ರಂಥದಲ್ಲಿ ಸುಮಾರು ಹದಿನೈದುಸಲ ಗುರುತು ಮಾಡುತ್ತಾ ಹೇಳಿದ್ದಾನೆ. ಭಗವದ್ಗೀತೆಯಲ್ಲಿ ಮೂರುಬಾರಿ ಹೇಳಿರುವಾಗ, ದ್ವಿತೀಯ ಗ್ರಂಥವಾದ ಇಂಜೀಲಿನಲ್ಲಿ ಸೂಚನೆಯಾಗಿ ಒಂದು ಅಥವಾ ಎರಡುಬಾರಿ ಹೇಳಿದ್ದರೇ, ತೃತೀಯ ಗ್ರಂಥ, ಕೊನೆಯ ಗ್ರಂಥವಾದ ಖುರಾನ್ ಗ್ರಂಥದಲ್ಲಿ ಸುಮಾರು ಹದಿನೈದಕ್ಕಿಂತ ಹೆಚ್ಚುಬಾರ ಹೇಳಿದ್ದಾನೆ.

ಭೂಮಿಮೇಲೆ ಪುನರ್ಜನ್ಮಗಳ ಕುರಿತು ಅತ್ಯಧಿಕವಾಗಿ ಹೇಳಿರುವ ಗ್ರಂಥವು ಖುರಾನ್ ಗ್ರಂಥವೇ ಎಂದು ಹೇಳಬಹುದು. ಆದರೇ ಪ್ರಜೆಗಳ ಬುದ್ಧಿಗೆ ಆ ವಿಷಯವು ಅರ್ಥವಾಗದೆ ಕೊನೆಗೆ “ಪುನರ್ಜನ್ಮಗಳೇ ಇಲ್ಲ”

ಎನ್ನುತ್ತಿದ್ದಾರೆ. ಖುರಾನ್ ಗ್ರಂಥದಲ್ಲಿ ಉಳಿದ ಗ್ರಂಥಗಳಿಗಿಂತಲು ಅಧಿಕವಾಗಿ ಪುನರ್ಜನ್ಮಗಳ ಪ್ರಸ್ತಾವನೆ ಬಂದಿದ್ದರೂ ಅದು ಎಲ್ಲವೂ ಪ್ರಳಯದ ನಂತರವೆಂದೋ, ಯಮಲೋಕದಲ್ಲೆಂದೋ, ಸ್ವರ್ಗಲೋಕದಲ್ಲೆಂದೋ ಅಂದುಕೊಳ್ಳುತ್ತಿದ್ದಾರೆ. ಮನುಷ್ಯ ಎಲ್ಲೋ ಇವೆಯೆಂದುಕೊಳ್ಳುವ ಸ್ವರ್ಗನರಕಗಳು ನಾವು ಜೀವಿಸುವ ಜೀವನದಲ್ಲೇ ಇವೆಯೆಂದು ಅಂದುಕೊಳ್ಳುತ್ತಿಲ್ಲ. ಯಾವಾಗಲೋ ನಡೆಯುವು ದೆಂಬ ಪ್ರಳಯವು ಜೀವನದೊಂದು ಕೊನೆಯಲ್ಲಿ ಮರಣ ಬಂದಾಗಲೇ ಶರೀರ ಪ್ರಳಯ ನಡೆಯುತ್ತಿದೆಯೆಂದು ತಿಳಿಯುತ್ತಿಲ್ಲ. ಅಂತಿಮ ದೈವಗ್ರಂಥದಲ್ಲಿ ಹೇಳಿರುವ ವಿಷಯಗಳೆಲ್ಲವೂ ನಮ್ಮ ಕಣ್ಣ ಮುಂದೆಯೇ ನಡೆಯುತ್ತಿದ್ದರೂ, ಅವುಗಳನ್ನು ಬುದ್ಧಿಯಿಂದ ಗ್ರಹಿಸದವನಾಗಿ ಯಾರೂ ಯಾವಾಗಲೂ ನೋಡದ, ಎಲ್ಲೂ ನಡೆಯದ ವಿಷಯಗಳನ್ನು ಎಲ್ಲೋ ಇರುವಂತೆ, ಯಾವಾಗಲೋ ನಡೆಯುವಂತೆ ಊಹಿಸಿಕೊಳ್ಳುತ್ತಿದ್ದಾನೆ. ಅದಕ್ಕೆಜೊತೆಯಾಗಿ ತಮಗಿಂತಲೂ ದೊಡ್ಡವರಾದ ಬೋಧಕರು ಬೋಧಿಸಿರು ವುದು ಸಹ ಯಥಾರ್ಥವಲ್ಲದ್ದೂ, ಊಹಿಸಿಕೊಂಡು ಹೇಳಿರುವುದೂ ಆಗಿರುವುದರಿಂದ, ಮನುಷ್ಯ ದೇವರು ಹೇಳಿರುವ ಜ್ಞಾನವನ್ನು ತಿಳಿದುಕೊಳ್ಳಲಾರದೆ ಹೋಗುತ್ತಿದ್ದಾನೆ. ಒಂದುಕಡೆ ಖುರಾನ್ ಗ್ರಂಥದಲ್ಲಿ 53ನೇ ಸೂರಾದಲ್ಲಿ 46, 47 ಆಯತ್‌ಗಳಲ್ಲಿ ವೀರ್ಯಬಿಂದುವಿನಿಂದಲೇ ಎರಡನೆಯ ಜನ್ಮ ಇರುವುದೆಂದು ಸ್ಪಷ್ಟವಾಗಿ ಹೇಳಿದ್ದರೂ ಎರಡನೆಯ ಜನ್ಮವಿಲ್ಲ, ನಾವು ಯಾರೂ ಪುನಃ ಭೂಮಿಮೇಲೆ ತಾಯಿತಂದೆಯರಿಗೆ ಹುಟ್ಟುತ್ತಿಲ್ಲ ಎನ್ನುವುದರಲ್ಲಿ ಅರ್ಥವೇ ಇಲ್ಲ. ಪುನರ್ಜನ್ಮಗಳ ವಿಷಯವು ಸುಮಾರು ಹದಿನೈದರಿಂದ ಇಪ್ಪತ್ತುಬಾರಿ ಖುರಾನ್ ಗ್ರಂಥದಲ್ಲಿ ಹೇಳಿದ್ದರೂ, ಅದನ್ನು ಬುದ್ಧಿ ಗ್ರಹಿಸದಿರುವುದರಿಂದ ಮನುಷ್ಯ ಅಜ್ಞಾನಮಾರ್ಗದೊಳಗೆ ಹೋಗುತ್ತಿದ್ದಾನೆ. ಅದೇ ವಿಷಯ ಅರ್ಥವಾಗಿ ಪುನರ್ಜನ್ಮಗಳಿವೆ ಎಂದು ಹೇಳುವವನೊಂದಿಗೆ ಅಭಿಪ್ರಾಯಭೇದಗಳು ಏರ್ಪಡುತ್ತಿವೆ.

ಪ್ರಪಂಚ ವಿಷಯದಲ್ಲಿ ಏರ್ಪಡುವ ಅಭಿಪ್ರಾಯಭೇದಗಳು ಸ್ವಲ್ಪ ಕಾಲಕ್ಕೆ ಇಲ್ಲದೇ ಹೋಗುವ ಅವಕಾಶವಿದೆ. ಏಕೆಂದರೇ! ಪ್ರಪಂಚ

ವಿಷಯಗಳೆಲ್ಲವೂ ಪ್ರತ್ಯಕ್ಷವಾಗಿ ಇರುವುದರಿಂದ ಅದರಲ್ಲಿನ ಸತ್ಯಾಸತ್ಯಗಳು ಸುಲಭವಾಗಿ ತಿಳಿಯುವ ಅವಕಾಶವಿದೆ. ಆದಕಾರಣ ಪ್ರಪಂಚ ವಿಷಯಗಳಲ್ಲಿ ಒಂದುಸಮಯದಲ್ಲಿ ಅಭಿಪ್ರಾಯ ಭೇದಗಳು ಏರ್ಪಟ್ಟರೂ ಕೊನೆಗವು ಇಲ್ಲದೇ ಹೋಗಿ ಒಬ್ಬರಿಗೊಬ್ಬರು ರಾಜೀ ಆಗುವುದಕ್ಕೆ ಅವಕಾಶವಿದೆ. ದೇವರ ವಿಷಯಗಳೆಲ್ಲವೂ ಸೂಕ್ಷ್ಮವಾದವುಗಳಾದ್ದರಿಂದ ಹೆಚ್ಚಾಗಿ ಬುದ್ಧಿಯಿಂದ ಅರ್ಥಮಾಡಿಕೊಳ್ಳ ಬೇಕಾಗಿರುತ್ತದೆ. ಬುದ್ಧಿಗೆ ಅರ್ಥವಾಗದಿದ್ದರೇ ಅದು ಪ್ರತ್ಯಕ್ಷವಾಗಿ ನಮ್ಮ ಮುಂದೆ ನಡೆಯುವ ವಿಷಯವಾದರೂ ಮನುಷ್ಯ ಅದನ್ನು ತಿಳಿಯಲಾರನು. ಆದ್ದರಿಂದ ದೇವರ ವಿಷಯದಲ್ಲಿ ಯಾರಿಗರ್ಥವಾಗಿರುವುದು ಅವನ ತಲೆಯಲ್ಲಿ ಗಟ್ಟಿಯಾಗಿ ನಿಂತಿರುತ್ತದೆ. ಅದನ್ನೇ ಅವನು ಸತ್ಯವೆಂದು ಕೊಳ್ಳುತ್ತಿರುತ್ತಾನೆ. ಉದಾಹರಣೆಗೆ ಪುನರ್ಜನ್ಮಗಳ ವಿಷಯದಲ್ಲಿ ಮನುಷ್ಯ ಪ್ರತ್ಯಕ್ಷವಾಗಿ ಹುಟ್ಟುತ್ತಿದ್ದರೂ, ಅವನಿಗೆ ಅರ್ಥವಾಗಿರುವುದನ್ನು ಅನುಸರಿಸಿ ಮನುಷ್ಯನಿಗೆ ಪುನರ್ಜನ್ಮಗಳೇ ಇಲ್ಲ ಎನ್ನುತ್ತಿದ್ದಾನೆ. ಅದನ್ನು ಸತ್ಯವೆಂದು ನಂಬಿರುವುದರಿಂದ ಸತ್ಯವನ್ನು ತಿಳಿದವರು ಹೇಳಿದರೂ, ಹೇಳಿರುವವನದೇ ಅಸತ್ಯವೆಂದು ಹೇಳುತ್ತಿದ್ದಾನೆ. ಪುನರ್ಜನ್ಮಗಳ ವಿಷಯವು ಅಧಿಕವಾಗಿ ಹೇಳಿರುವ ಗ್ರಂಥದಲ್ಲಿನ ವಿಷಯವನ್ನೇ ಅಲ್ಲಗಳೆಯುವ ಸ್ಥಿತಿಯಲ್ಲಿ ಮನುಷ್ಯನಿರುವುದರಿಂದ ಮನುಷ್ಯನಿಗೆ ದೇವರ ಜ್ಞಾನವು ಸಂಪೂರ್ಣವಾಗಿ ಅರ್ಥವಾಗಲಿಲ್ಲವೆಂದು ಹೇಳಬಹುದು.

ಒಂದು ಪುನರ್ಜನ್ಮಗಳ ವಿಷಯದಲ್ಲಿಯೇ ಅಲ್ಲದೆ 'ದೇವರು ಅವತರಿಸುತ್ತಾನೆ' ಎನ್ನುವ ವಿಷಯದಲ್ಲಿ ಸಹ ಜ್ಞಾನಿಗಳ ಅಜ್ಞಾನಿಗಳ ಮಧ್ಯದಲ್ಲಿ ಒಂದೇ ಅವಗಾಹನೆ ಇಲ್ಲ. ಕೆಲವರು ದೇವರು ಬಂದು ಭೂಮಿಮೇಲೆ ಹುಟ್ಟುತ್ತಿದ್ದಾನೆಂದು ಹೇಳುತ್ತಿರುವಾಗ 'ದೇವರು ಹುಟ್ಟುವುದು ಇಲ್ಲವೇ ಇಲ್ಲ' ಎಂದು ಕೆಲವರು ಹೇಳುತ್ತಿದ್ದಾರೆ. ಭಗವದ್ಗೀತೆಯನ್ನು ಓದಿರುವ ಹಿಂದೂಗಳು ಭಗವದ್ಗೀತೆಯಲ್ಲಿ ಹೇಳಿರುವ ಪ್ರಕಾರ ದೇವರು ಧರ್ಮಸಂಸ್ಥಾಪನೆಗಾಗಿ ಬಂದು ಭೂಮಿಮೇಲೆ ಹುಟ್ಟುತ್ತಿದ್ದಾನೆಂದು ನಂಬುತ್ತಿರುವಾಗ, ಮುಸ್ಲೀಮ್‌ರು ತಮ್ಮ

ಮತ ಧರ್ಮದ ಪ್ರಕಾರ ದೇವರು ಹುಟ್ಟುವುದಿಲ್ಲ ಎಂದು ಹೇಳುವುದರಿಂದ, ದೇವರ ಜನ್ಮದಲ್ಲಿ ಕೂಡಾ ಹಿಂದೂಗಳಿಗು ಮುಸ್ಲೀಮ್‌ಗಳಿಗು ಮಧ್ಯದಲ್ಲಿ ಸರಿಸಮಾನತೆ ಇಲ್ಲದೇ ಹೋಗಿದೆಯೆಂದು ತಿಳಿಯುತ್ತಿದೆ. ಭಗವದ್ಗೀತೆಯಲ್ಲಿ ಜ್ಞಾನಯೋಗವೆಂಬ ಅಧ್ಯಾಯ ಮೊದಲಲ್ಲಿಯೇ 7, 8 ಶ್ಲೋಕಗಳಲ್ಲಿ ದೇವರು ಅವತರಿಸಿ ಧರ್ಮಸಂಸ್ಥಾಪನೆ ಮಾಡುವನೆಂದು ಅಧರ್ಮಗಳನ್ನು ಅಡಗಿಸಿಹಾಕುವನೆಂದು ಹೇಳಿದ್ದಾರೆ. ಹಾಗೆ ಭಗವದ್ಗೀತೆಯಲ್ಲಿ ಒಂದುಕಡೆ ಮಾತ್ರ ಹೇಳಿರುವ ದೇವರ ಅವತಾರ ವಿಷಯ ಖುರಾನ್ ಗ್ರಂಥದಲ್ಲಿ 15ನೇ ಸೂರಾ 29, 30 ಆಯತ್‌ಗಳಲ್ಲಿಯು, 89ನೇ ಸೂರಾ 21, 22 ಆಯತ್‌ಗಳಲ್ಲಿಯು **"ದೇವರು ಅವತರಿಸುತ್ತಾನೆ"** ಎಂದು ಅರ್ಥವಾಗುವಂತೆ ಹೇಳಿದ್ದಾರೆ. ಆದರೂ ಮುಸ್ಲಿಮ್‌ರು ಆ ಮಾತನ್ನು ಪರಿಗಣೆಯೊಳಗೆ ತೆಗೆದುಕೊಳ್ಳುತ್ತಿಲ್ಲ. ಭಗವದ್ಗೀತೆಯಲ್ಲಿ ಒಂದೇಬಾರಿ ಹೇಳಿರುವ ದೇವರ ಅವತಾರ ವಿಷಯ, ಖುರಾನ್ ಗ್ರಂಥದಲ್ಲಿ ಎರಡುಬಾರಿ ಹೇಳಿದ್ದರೂ ಅದನ್ನು ಅವರು ದೃಢಪಡಿಸುತ್ತಿಲ್ಲ. ಈ ವಿಧವಾಗಿ ದೇವರ ಜನ್ಮ ವಿಷಯದಲ್ಲಿ ಸಹ ಹಿಂದೂಗಳಿಗೆ ಮುಸ್ಲಿಮ್‌ಗಳಿಗೆ ಬೇರೆಬೇರೆ ಅಭಿಪ್ರಾಯಗಳಿವೆ, ಏಕಾಭಿಪ್ರಾಯದಲ್ಲಿ ಇಲ್ಲ.

ಈ ವಿಧವಾಗಿ ನೋಡಿದರೇ ಮನುಷ್ಯ 'ಪುನರ್ಜನ್ಮ' ವಿಷಯದಲ್ಲೂ, 'ದೇವರು ಅವತರಿಸುತ್ತಾನೆ' ಎಂಬ ವಿಷಯದಲ್ಲಿಯೂ ಒಂದು ವಿಧವಾಗಿ ಮುಸ್ಲಿಮ್‌ಗಳೇ ಅಪಾರ್ಥ ಮಾಡಿಕೊಂಡಿದ್ದಾರೆ ಎಂದುಕೊಳ್ಳೋಣ. ಆದರೇ ದೇವರು ಒಬ್ಬನೇ ಎಲ್ಲರಿಗೂ ಅಧಿಪತಿಯೆಂದು ಭಗವದ್ಗೀತೆಯಲ್ಲಿ ಬಹಳಸಲ ಹೇಳಿದ್ದರೂ, ಹಿಂದೂಗಳು ಆ ವಿಷಯವನ್ನು ಗ್ರಹಿಸದೆ ದೇವರನ್ನು ಒಬ್ಬನನ್ನೇ ಆರಾಧಿಸದೆ ದೇವರಲ್ಲದ ದೇವತೆಗಳನ್ನು ಎಷ್ಟೋಜನರನ್ನು ದೇವರೊಂದಿಗೆ ಸಮಾನವಾಗಿ ಆರಾಧಿಸುತ್ತಿದ್ದಾರೆ. "ನಾನು ಹೊರತು ಇತರ ದೇವರಿಲ್ಲ" ಎಂದು ಭಗವದ್ಗೀತೆಯಲ್ಲಿ ಹೇಳಿದ್ದರೂ ಆ ಮಾತನ್ನು ಲೆಕ್ಕಮಾಡದ ಹಿಂದೂಗಳು ಇತರ ದೇವತೆಗಳನ್ನು ಆರಾಧಿಸುತ್ತಿದ್ದಾರೆ. 'ದೇವರು ಒಬ್ಬನೇ' ಎಂಬ ವಿಷಯವು ಖುರಾನ್ ಗ್ರಂಥದಲ್ಲಿ ಸಹ ಹೇಳಲ್ಪಟ್ಟಿದೆ. ಖುರಾನ್‌ನಲ್ಲಿ ಹೇಳಿರುವ

ಪುನರ್ಜನ್ಮಗಳ ವಿಷಯವನ್ನು, ದೇವರ ಅವತಾರ ವಿಷಯವನ್ನು ಗ್ರಹಿಸದ ಮುಸ್ಲಿಮ್‌ರು 'ದೇವರು ಒಬ್ಬನೇ' ಎಂಬ ವಿಷಯವನ್ನು ಚೆನ್ನಾಗಿ ಗ್ರಹಿಸಿ ಒಂದೇ ದೇವರನ್ನು ಆರಾಧಿಸುತ್ತಿದ್ದಾರೆ. ಈ ವಿಷಯದಲ್ಲಿ ಹಿಂದೂಗಳು ವಕ್ರಮಾರ್ಗ ಹಿಡಿದುಹೋಗಿದ್ದರೇ, ಮುಸ್ಲಿಮ್‌ರು ವಾಸ್ತವ ಜ್ಞಾನವನ್ನು ಆಶ್ರಯಿಸಿ ಒಂದೇ ದೇವರನ್ನು ವಿಶ್ವಾಶಿಸುವುದು ನಡೆದಿದೆ. ಈ ವಿಧಾನದಲ್ಲಿ ಮುಸ್ಲಿಮ್‌ರು ವಿಗ್ರಹಾರಾಧನೆಯನ್ನು ಖಂಡಿಸಿದರೇ, ಹಿಂದೂಗಳು ವಿಗ್ರಹಾರಾಧನೆ ಮಾಡುತ್ತಿದ್ದಾರೆ. ಈ ವಿಷಯದಲ್ಲಿ ಮುಸ್ಲಿಮ್‌ರು ಎಲ್ಲೂ ದಾರಿ ತಪ್ಪದೆ ಅನ್ಯ ದೇವತಾರಾಧನೆಯನ್ನು ಖಂಡಿಸುತ್ತಿದ್ದಾರೆ. ವಿಗ್ರಹಾರಾಧನೆ ಸನಾತನ ಧರ್ಮವೆಂದು ಹಿಂದೂ ಬೋಧಕರು ಹೇಳುತ್ತಿದ್ದಾರೆ. ಹೀಗೆ ಈ ವಿಷಯಗಳಲ್ಲಿ ಹಿಂದೂಗಳಿಗೆ ಮುಸ್ಲಿಮ್‌ಗಳಿಗೆ ಅಭಿಪ್ರಾಯ ಭೇದಗಳಿವೆ.

ಭಗವದ್ಗೀತೆಯಲ್ಲಿ "ಮೂರು ಆತ್ಮಗಳ ವಿಷಯ" ಹೇಳಿದ್ದರೂ ಅದು ಹಿಂದೂಗಳಿಗೆ ಅರ್ಥವಾಗಲಿಲ್ಲ. ಹಾಗೆಯೇ ಖುರಾನ್ ಗ್ರಂಥದಲ್ಲಿ "ಮೂರು ಆತ್ಮಗಳ ವಿಷಯವನ್ನು" ಹೇಳಿದ್ದರೂ ಮುಸ್ಲಿಮ್‌ರಿಗೆ ಸಹ ಆ ವಿಷಯವು ಅರ್ಥವಾಗಲಿಲ್ಲ. ಹೀಗೆ ಎಷ್ಟೋ ವಿಷಯಗಳು ಎರಡು ಗ್ರಂಥಗಳಲ್ಲಿ ಸಮಾನವಾಗಿ ಹೇಳಿದ್ದರೂ, ಅವುಗಳ ತಂಟೆಗೆ ಇತ್ತ ಹಿಂದೂಗಳು, ಅತ್ತ ಮುಸ್ಲಿಮ್‌ಗಳು ಹೋಗದಿರುವುದರಿಂದ ಆ ವಿಷಯಗಳೇ ಇಬ್ಬರಿಗೂ ತಿಳಿಯದೇ ಹೋಗಿವೆ. ಆದ್ದರಿಂದ ಆ ವಿಷಯಗಳ ಪ್ರಸ್ತಾವನೆ ಇಬ್ಬರಲ್ಲೂ ಇಲ್ಲದಿರುವುದರಿಂದ ಅವುಗಳ ವಿಷಯದಲ್ಲಿ ಅಭಿಪ್ರಾಯ ಭೇದಗಳಿಲ್ಲ. ಉಳಿದ ಜ್ಞಾನ ವಿಷಯಗಳನ್ನು ಅನೇಕವಾಗಿ ಎರಡು ಗ್ರಂಥಗಳಲ್ಲಿ ಹೇಳಿದ್ದರೂ, ಅವುಗಳಮೇಲೆ ಆಸಕ್ತಿ ಮುಸ್ಲಿಮ್‌ಗಳಿಗಾಗಲೀ, ಹಿಂದೂಗಳಿಗಾಗಲೀ ಇಲ್ಲ. 'ದೇವರು ಒಬ್ಬನೇ' ಎಂಬ ವಿಷಯದಲ್ಲಿ ಮುಸ್ಲಿಮ್‌ರು ಸಕ್ರಮವಾದ ದಾರಿಯಲ್ಲಿದ್ದರೇ, ಹಿಂದೂಗಳು ದಾರಿ ತಪ್ಪಿ ವಕ್ರಮಾರ್ಗ ಹಿಡಿದು ಹೋಗಿದ್ದಾರೆ. ಪುನರ್ಜನ್ಮಗಳ ವಿಷಯದಲ್ಲಿ ಹಿಂದೂಗಳು ಸಕ್ರಮವಾದ ಮಾರ್ಗದಲ್ಲಿರುವಾಗ, ಮುಸ್ಲಿಮ್‌ಗಳು ಅಪಮಾರ್ಗ ಹಿಡಿದು ತಪ್ಪುದಾರಿಯಲ್ಲಿ ಹೋಗಿದ್ದಾರೆ. ಉಳಿದ ದೈವ ವಿಷಯಗಳು ಎಷ್ಟೋ

ಹತ್ತರ ಸಂಖ್ಯೆಯಲ್ಲಿರುವಾಗ, 'ದೇವರು ಒಬ್ಬನೇ' ಎಂಬ ಮಾತಿನಲ್ಲೂ, 'ಪುನರ್ಜನ್ಮಗಳ' ವಿಷಯದಲ್ಲೂ ಹಿಂದೂಗಳು ಮುಸ್ಲಿಮ್‌ರು ಬೇರೆಬೇರೆ ಅಭಿಪ್ರಾಯಗಳು ಹೊಂದಿದ್ದು, ಬೇರೆಬೇರೆ ಅಭಿಪ್ರಾಯಗಳಿಂದ ಅಸೂಯೆಯನ್ನು ಹೊಂದಿ, ಅಸೂಯೆಯಿಂದ ಶತ್ರುತ್ವಕ್ಕೆ ದಾರಿಮಾಡುತ್ತಿದ್ದಾರೆ. ಶತ್ರು ಭಾವನೆಯಿಂದ ಅಲ್ಲಲ್ಲಿ ಒಬ್ಬರಿಗೊಬ್ಬರು ಹಿಂಸಿಸಿಕೊಳ್ಳುವುದು ನಡೆಯುತ್ತಿದೆ. ಕೆಲವು ಇತರ ದೇಶಗಳಲ್ಲಿ ದೈವಜ್ಞಾನ ಸ್ವಲ್ಪವಾದರೂ ತಿಳಿಯದವರಾಗಿ, ಮೂರ್ಖತನದಿಂದ ಮುಂದಕ್ಕೆ ಹೋಗುತ್ತಾ, ಹಿಂಸೆಯನ್ನೇ ಪ್ರಧಾನವೃತ್ತಿಯಾಗಿ ಇಟ್ಟುಕೊಂಡು ಇತರ ಮತಗಳ ಮೇಲೆ ದಾಳಿ ಮಾಡುವುದು ನಡೆಯುತ್ತಿದೆ.

ಒಬ್ಬರಿಗೊಬ್ಬರು ಅರ್ಥ ಮಾಡಿಕೊಳ್ಳದ ವಿಷಯಗಳು ಎರಡು ಮಾತ್ರವೇ. ಭೇದಾಭಿಪ್ರಾಯಗಳು ಇರುವ ವಿಷಯಗಳು ಕೇವಲ ಎರಡು ಮಾತ್ರವೇ! ಆದರೇ ದೇವರ ಜ್ಞಾನವಿರುವ ತಮ್ಮ ಗ್ರಂಥಗಳೆಂದು ಹಿಂದೂಗಳು, ಮುಸ್ಲಿಮ್‌ರು ಹೇಳಿಕೊಳ್ಳುವ ಎರಡು ದೈವಗ್ರಂಥಗಳಲ್ಲಿಯೂ ಶೇಕಡ 98ರಷ್ಟು ಜ್ಞಾನ ವಿಷಯಗಳು ಇವೆ. ಶೇಕಡ 98ರಷ್ಟು ಜ್ಞಾನ ವಿಷಯಗಳು ತಮ್ಮ ಗ್ರಂಥಗಳಲ್ಲಿದ್ದರೂ ಅವುಗಳನ್ನು ತಿಳಿದುಕೊಳ್ಳೋಣವೆಂಬ **ಶ್ರದ್ಧೆ** ಎರಡು ಮತಗಳಲ್ಲಿ ಇಲ್ಲ. ಇನ್ನು ಮಧ್ಯದಲ್ಲಿರುವ ಕ್ರೈಸ್ತವ ಮತ ವಿಷಯಕ್ಕೆ ಬಂದರೇ ಅವರು ತಮ್ಮ ಮತ ಶಾಂತಿ ಮತವೆಂದು ಹೇಳಿಕೊಳ್ಳುತ್ತಾ, ಯಾರೊಂದಿಗೂ ಘರ್ಷಣೆ ಬೀಳದೆ ತಮ್ಮ ಕೆಲಸವನ್ನು ತಾವು ಮಾಡಿಕೊಳ್ಳುವಹಾಗೆ, ಕಾಣಿಸುತ್ತಿರುತ್ತಾರೆ. ಆದರೇ ಇವರಲ್ಲಿಯೂ ಪರಮತ ದ್ವೇಷವಿದ್ದರೂ ಅದು ಒಳಗಡೆ ಇದ್ದು ಹೊರಗೆ ಕಾಣಿಸದಂತೆ ಇರುತ್ತದೆ. ಇವರು ಮುಸ್ಲಿಮ್‌ಗಳು ಹಿಂದೂಗಳು ಮಾತನಾಡಿದಂತೆ ಪ್ರತ್ಯಕ್ಷವಾಗಿ ಏನೂ ಮಾತನಾಡದೆ, ಅವರ ಅಸೂಯೆಯನ್ನು ಹೊರಗೆ ಕಾಣಿಸದೆ ಒಳಗೇ ಇರುವಂತೆ ಇರುತ್ತಾರೆ. ಹಿಂದೂಗಳು ಮುಸ್ಲಿಮ್‌ಗಳು **"ಪುನರ್ಜನ್ಮ"** ವಿಷಯದಲ್ಲಿಯೂ, **"ದೇವರು ಒಬ್ಬನೇ"** ಎಂಬ ವಿಷಯದಲ್ಲಿಯೂ ವಿರುದ್ಧ ಭಾವನೆ ಇರುವಂತೆ ಕಾಣಿಸುತ್ತಿರುತ್ತಾರೆ ಅಲ್ಲವೇ! ಆದರೇ ಕ್ರೈಸ್ತರು ಮಾತ್ರ ಯಾವ ಜ್ಞಾನ ವಿಷಯಗಳಲ್ಲಿಯೂ ಎಲ್ಲೂ ಅಭಿಪ್ರಾಯ ಭೇದಗಳನ್ನು

ಬಹಿರಂಗಪಡಿಸುವುದಿಲ್ಲ. ಅವರ ಚರ್ಚಿಗೆ ಅವರು ಹೋಗುವುದು, ಅವರ ಪ್ರಾರ್ಥನೆ ಅವರು ಮಾಡಿಕೊಳ್ಳುವುದು ನಡೆಯುತ್ತಿರುತ್ತದೆ. ಈ ವಿಧವಾಗಿ ಶಾಂತಿ ಸ್ವಭಾವದವರಾಗಿ ಕಾಣಿಸುವ ಕ್ರೈಸ್ತರು ಭೂಮಿಮೇಲೆ ಎಲ್ಲ ಮತಗಳಿಗಿಂತಲೂ ಅತಿ ದೊಡ್ಡ ಮತದವರಾಗಿದ್ದಾರೆ. ಅದಕ್ಕೆ ಕಾರಣ ಅವರು ಮತಪ್ರಚಾರವನ್ನೇ ಹೆಚ್ಚು ಪ್ರಾಧಾನ್ಯವಾಗಿ ಇಟ್ಟುಕೊಂಡಿದ್ದಾರೆ. ತಮ್ಮ ಗ್ರಂಥದಲ್ಲಿನ ಜ್ಞಾನವನ್ನು ಹೊರಗೆ ಹೇಳುತ್ತಾ, ತಮ್ಮ ಮತದಲ್ಲಿ ಪಾಪಕ್ಷಮಾಪಣೆ ಇದೆಯೆಂದೂ, ಉಳಿದ ಮತಗಳಲ್ಲಿ ಪಾಪಕ್ಷಮಾಪಣೆ ಇಲ್ಲವೆಂದು ಹೇಳುವುದರಿಂದ, ಬಹಳಜನ ಪ್ರಜೆಗಳು ಕ್ರೈಸ್ತರಕಡೆ ಹೋಗುವುದು ನಡೆದಿದೆ. ಅದರಿಂದ ಆ ಮತವು ಶೀಘ್ರವಾಗಿ ಸ್ವಲ್ಪ ಕಾಲದಲ್ಲಿಯೇ ಅಭಿವೃದ್ಧಿ ಹೊಂದುತ್ತಾ ಬಂದಿದೆ.

ಹಿಂದೂ ಮತದಲ್ಲಿ ಈ ದೇವತೆ ದೊಡ್ಡದು, ಆ ದೇವತೆ ಇನ್ನೂ ದೊಡ್ಡದೆಂದು ಅವರ ಕೋರಿಕೆಗಳನ್ನು ತೀರಿಸಿಕೊಳ್ಳುವುದಕ್ಕೆ ಅನೇಕ ದೇವತೆಗಳನ್ನು ಪೂಜಿಸುತ್ತಿದ್ದಾರೆ. ಯಾವ ದೇವತೆಗೆ ಕೈಮುಗಿದರೂ ಅಲ್ಲಿ ಮುಖ್ಯವಾಗಿ ಅವರ ಕೋರಿಕೆಗಳ ನಿಮಿತ್ತವೇ ಕೈಮುಗಿಯುತ್ತಿರುತ್ತಾರೆ. ದೇವತೆಗಳಲ್ಲಿ ಸಹ ಮನುಷ್ಯ ಕೋರಿರುವ ಕೋರಿಕೆಗಳನ್ನು ಬೇಗನೆ ತೀರಿಸುವ ದೇವತೆಗಳ ಬಳಿಗೆ ಬಹಳಜನ ಭಕ್ತರು ಹೋಗುವುದು ನಡೆಯುತ್ತಿದೆ. ತಿರುಪತಿ ವೆಂಕಟೇಶ್ವರನನ್ನು ಪ್ರಜೆಗಳು ಕಷ್ಟಬಂದಾಗ ಮುಗಿಯುವವನು, ಕೋರಿದ ಕೋರಿಕೆಗಳನ್ನು ನೆರವೇರಿಸುವವನು ಎಂದು ಹೇಳಿಕೊಳ್ಳುತ್ತಿರುತ್ತಾರೆ. ತಿರುಪತಿ ದೇವಸ್ಥಾನವು ಎಲ್ಲಾಕಾಲದಲ್ಲಿ ಕಿಕ್ಕಿರಿದ ಭಕ್ತರೊಂದಿಗೆ ತುಂಬಿರುತ್ತದೆ. ದೇಶದಲ್ಲಿ ಎಷ್ಟೋ ಹಿಂದೂ ದೇವತೆಗಳ ಗುಡಿಗಳಿದ್ದರೂ, ಕೆಲವು ಹೆಚ್ಚು ರದ್ದೀಯಾಗಿರುವುದು, ಕೆಲವು ರದ್ದೀಯಾಗಿಲ್ಲದೇ ಇರುವುದು ನೋಡುತ್ತಲೇ ಇದ್ದೇವೆ. ಹಿಂದೂಗಳಲ್ಲಿ ಭಕ್ತಿ ಭಾವನೆಗಳಿದ್ದರೂ ಅವು ಅನೇಕ ದೇವತೆಗಳ ಮೇಲಿದೆ. ಅಸಲಾದ ಸೃಷ್ಠಿಕರ್ತನಾದ ದೇವರು ಎಂಬ ವಿಷಯವನ್ನು ಸಹ ಬಹಳಜನ ಹಿಂದೂಗಳಿಗೆ ತಿಳಿದಿಲ್ಲ. ಹಿಂದೂಗಳಲ್ಲಿ ತತ್ವಕಾರಣರಾದ ಬಹುಸ್ವಲ್ಪ ಜನರಿಗೆ ಹೊರತುಪಡಿಸಿ, ಎಲ್ಲರಿಗೂ ದೊಡ್ಡವನಾದ ದೇವರ ವಿಷಯವು ತಿಳಿದಿಲ್ಲ. ಹಿಂದೂಗಳ ದೃಷ್ಠಿಯಲ್ಲಿ ಅನೇಕ ದೇವತೆಗಳು

ಹೊರತುಪಡಿಸಿ ನಿಜವಾದ ದೇವರು ಇಲ್ಲ. ಈ ಒಂದು ವಿಷಯದಲ್ಲಿಯೇ ಹಿಂದೂಗಳಿಗು ಮುಸ್ಲಿಮ್‌ಗಳಿಗು ಸ್ವಲ್ಪವೂ ಸರಿಹೋಗುವುದಿಲ್ಲ.

ಮುಸ್ಲಿಮ್‌ರಲ್ಲಿ ಪಾಪಕ್ಷಬಮಾಪಣೆ ಎಂಬ ಮಾತಿಲ್ಲ. ಒಂದು ಕ್ರೈಸ್ತರಲ್ಲಿ ಹೊರತು ಹಿಂದೂಗಳಲ್ಲಾಗಲೀ, ಮುಸ್ಲಿಮ್‌ಗಳಲ್ಲಾಗಲೀ ಪಾಪಕ್ಷಮಾಣೆ ಎಂಬ ಮಾತೇ ಕೇಳಿಸುವುದಿಲ್ಲ. ಒಂದು ಪಾಪಕ್ಷಮಾಪಣೆ ವಿಷಯವನ್ನು ಪ್ರಚಾರ ಮಾಡುವುದರಲ್ಲಿ ಕ್ರೈಸ್ತರು ಹೆಚ್ಚು ಶ್ರದ್ಧೆ ತೋರುವುದರಿಂದ, ಪ್ರಜೆಗಳೆಲ್ಲರೂ ಪಾಪ ಮಾಡಿರುವವರೇ ಆಗಿರುವುದರಿಂದ, ಪಾಪಕ್ಷಮಾಪಣೆ ಎಲ್ಲರಿಗೂ ಅವಶ್ಯವಾದುದರಿಂದ, ಬಹಳಜನ ಕ್ರೈಸ್ತರ ಕಡೆ ಕುತೂಹಲ ತೋರಿಸುವುದರಿಂದ, ಆ ಮತವು ಭೂಮಿಮೇಲೆ ಅತಿದೊಡ್ಡ ಮತವಾಗಿ ಬೆಳೆದುಹೋಗಿದೆ. ದೇವರು ಭೂಮಿಮೇಲೆ ಪ್ರಜೆಗಳೆಲ್ಲರಿಗೂ ಒಬ್ಬರೇ ಆಗಿರುವುದರಿಂದ ಪಾಪಕ್ಷಮಾಪಣೆ ಒಂದು ಕ್ರೈಸ್ತವ ಮತದಲ್ಲಿಯೇ ಇದೆಯೆಂದು, ಉಳಿದ ಮತಗಳಲ್ಲಿ ಇಲ್ಲವೆಂದು ಹೇಳಲಿಲ್ಲ. ಮನುಷ್ಯನಿಗೆ ಪಾಪಕ್ಷಮಾಪಣೆ ಎಲ್ಲಾ ಮತಗಳಲ್ಲಿ ಸಮಾನವಾಗಿದೆ. ಹಿಂದೂಗಳ ಗ್ರಂಥವಾಗಿ ಹೆಸರುವಾಸಿಯಾದ ಭಗವದ್ಗೀತೆಯಲ್ಲಿಯೂ, ಮುಸ್ಲಿಮ್‌ರ ಗ್ರಂಥವಾಗಿ ಹೆಸರುವಾಸಿಯಾದ ಖುರಾನ್ ಗ್ರಂಥದಲ್ಲಿಯೂ ಕ್ರೈಸ್ತರು ನಮ್ಮದೆಂದು ಹೇಳುವ ಬೈಬಲ್‌ನಲ್ಲಿ ಹೇಳಿದಂತೆಯೇ ಪಾಪಕ್ಷಮಾಪಣೆ ಕುರಿತು ಹೇಳಿದ್ದಾರೆ. ಎಲ್ಲಾ ಮತಗಳಿಗೂ ದೈವಗ್ರಂಥ ಒಂದೇ, ನಂತರ ಅದೇ ಮೂರು ದೈವಗ್ರಂಥಗಳಾಗಿ ಬದಲಾಗಿಹೋಗಿದೆ. ಆದ್ದರಿಂದ ಮೂರು ಗ್ರಂಥಗಳಲ್ಲಿಯೂ ಪಾಪಕ್ಷಮಾಪಣೆ ಕುರಿತು ಹೇಳಿದ್ದಾರೆ. ಒಂದು ಗ್ರಂಥದಲ್ಲಿ ಪಾಪಕ್ಷಮಾಪಣೆ ಹೇಗಿದೆಯೆಂದು ಹೇಳಿದ್ದಾರೋ ಉಳಿದ ಗ್ರಂಥಗಳಲ್ಲಿಯೂ ಹಾಗೆಯೇ ಇರುವಂತೆ ಇದೆ. ಆದರೇ ಪಾಪ ಕ್ಷಮಾಣೆಯನ್ನು ಕುರಿತು ತಮ್ಮ ಗ್ರಂಥಗಳಲ್ಲಿ ಇರುವಂತೆ ಹಿಂದೂಗಳಾಗಲೀ, ಮುಸ್ಲಿಮ್‌ಗಳಾಗಲೀ ತಿಳಿದಿಲ್ಲ. ಆದ್ದರಿಂದ ಕ್ರೈಸ್ತರು ಹೇಳಿದಂತೆ ಪಾಪಕ್ಷಮಾಣೆ ಕುರಿತು ಉಳಿದ ಎರಡು ಮತದವರು ಹೇಳುತ್ತಿಲ್ಲ.

ಪ್ರಥಮದೈವಗ್ರಂಥವಾದ ಭಗವದ್ಗೀತೆಯಲ್ಲಿ **ಜ್ಞಾನಾಗ್ನಿ**ಯಿಂದ ಕರ್ಮ ದಹಿಸಲ್ಪಡುವುದೆಂದು ಜ್ಞಾನಯೋಗವೆಂಬ ಅಧ್ಯಾಯದಲ್ಲಿ 37ನೇ ಶ್ಲೋಕದಲ್ಲಿ ಹೇಳಿದ್ದಾರೆ.

***ಶ್ಲೋ॥ ಯಥೈದಾಂಸಿ ಸಮಿದ್ಧೋಗ್ನಿ ರ್ಭಸ್ಮಸಾತ್ಕುರು ತೇರ್ಜುನ ।***
***ಜ್ಞಾನಾಗ್ನಿ ಸ್ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ॥***

ಭಾವಾರ್ಥ:– **"ಅಗ್ನಿಯಲ್ಲಿ ಎಷ್ಟು ಕಟ್ಟಿಗೆಗಳಾದರೂ ಸುಟ್ಟು ಬೂದಿ ಆದಹಾಗೆ ಜ್ಞಾನವೆಂಬ ಅಗ್ನಿಯಲ್ಲಿ ಎಲ್ಲ ವಿಧಗಳ ಕರ್ಮಗಳು ಸುಟ್ಟುಹೋಗುವುವು"** ಎಂದು ಹೇಳಿದ್ದಾರೆ. ಇಲ್ಲಿ ದೇವರ ಜ್ಞಾನ ತಿಳಿದವನಿಗೆ, ಅವನಿಗೆ ತಿಳಿದ ಜ್ಞಾನವೇ ಅಗ್ನಿಯಾಗಿ ಬದಲಾಗಿಹೋಗಿ, ಅವನಲ್ಲಿನ ಕರ್ಮವನ್ನು ಸುಟ್ಟುಹಾಕುವುದು. ಇದೇ ವಿಧಾನವೇ ಉಳಿದ ಎರಡು ಗ್ರಂಥಗಳಲ್ಲಿಯೂ ಇದೆ. ಆದರೇ ಇಲ್ಲಿ ಹೇಳಿದಂತೆಯೇ ಹೇಳದೆ, ಬೇರೊಂದು ವಿಧವಾಗಿ ಹೇಳಿರುವುದರಿಂದ, ಒಂದು ಗ್ರಂಥಕ್ಕು ಮತ್ತೊಂದು ಗ್ರಂಥಕ್ಕು ಸ್ವಲ್ಪ ಭಾಷೆಯಲ್ಲಿ ಬದಲಾವಣೆ ಇರುವುದರಿಂದ, ಭಗವದ್ಗೀತೆಯಲ್ಲಿ ಹೇಳಿರುವ ವಿಷಯವೇ ಬೈಬಲ್‌ನಲ್ಲಿಯು, ಬೈಬಲ್‌ನಲ್ಲಿ ಹೇಳಿರುವ ವಿಷಯವೇ ಖುರಾನ್‌ನಲ್ಲಿಯು ಇದೆ. ಭಗವದ್ಗೀತೆಯಲ್ಲಿ **'ಕರ್ಮ ದಹನೆ'** ಎಂದಿದ್ದಾರೆ. ಬೈಬಲ್‌ನಲ್ಲಿ **ಪಾಪಕ್ಷಮಾಪಣೆ'** ಎಂದಿದ್ದಾರೆ. ಖುರಾನ್‌ನಲ್ಲಿ **'ದೇವರು ಕ್ಷಮಾಶೀಲನು'** ಎಂದಿದ್ದಾರೆ. ದೇವರು ಯಾವುದನ್ನು ಕ್ಷಮಿಸುವನು? ಎಂಬ ಪ್ರಶ್ನೆ ಹಾಕಿದರೇ **'ನಮ್ಮ ಕರ್ಮವನ್ನು ಕ್ಷಮಿಸುವನು'** ಎಂಬ ಉತ್ತರವೇ ದೊರೆಯುವುದು. ಕರ್ಮದಹನ ಎಂದರೂ, ಕರ್ಮ ಕ್ಷಮಾಪಣೆ ಎಂದರೂ, ಕ್ಷಮಾಶೀಲತೆ ಎಂದರೂ ಎಲ್ಲಾ ಒಂದೇ ಭಾವನೆಗೆ ಸಂಬಂಧಿಸಿರುವುವು! ಮೂರು ದೈವಗ್ರಂಥಗಳಲ್ಲಿ ಒಂದೇಭಾವನೆ ಇದೆಯೆಂದು ಮೂರು ಗ್ರಂಥಗಳಲ್ಲಿ ಹೇಳಿರುವವನು ಒಂದೇ ದೇವರೆಂದೂ, ಮನುಷ್ಯರು ತಿಳಿಯದೆಹೋಗಿರುವು ದರಿಂದ, ಮನುಷ್ಯರು ಮತಗಳೆಂಬ ಗೋಡೆ ಕಟ್ಟಿಕೊಂಡಿರುವುದರಿಂದ, ದೇವರು ಹೇಳಿರುವ ಜ್ಞಾನವು ತಿಳಿಯದೇ ಹೋಗಿದೆ. ಅದರಿಂದ ಕ್ರೈಸ್ತರು "ನಮ್ಮ ಮತದಲ್ಲಿಯೇ ಪಾಪಕ್ಷಮಾಪಣೆ ಇದೆ, ಇತರ ಮತಗಳಲ್ಲಿ ಎಲ್ಲೂ ಪಾಪಕ್ಷಮಾಪಣೆ

ಇಲ್ಲ" ಎಂದು ಅಂದುಕೊಳ್ಳುತ್ತಿದ್ದಾರೆ. ಉಳಿದ ಎರಡು ಮತದವರು ಕ್ರೈಸ್ತವ ಮತದಲ್ಲಿರುವಹಾಗೆ ನಮ್ಮ ಮತದಲ್ಲಿ ಸಹ ಪಾಪ ಕ್ಷಮಾಪಣೆ ಇದೆಯೆಂದು ಅಂದುಕೊಳ್ಳುತ್ತಿಲ್ಲ. ನಾವು ಪಾಪ ಮಾಡಿದ್ದೇವೆಂದು ಎಲ್ಲರೂ ಅಂದುಕೊಳ್ಳುವುದರಿಂದ, ಪಾಪ ಕ್ಷಮಾಪಣೆ ಇರುವ ಮತದೊಳಗೆ ಹೋದರೇ ಪಾಪ ಹೋಗುತ್ತದೆಂಬ ಉದ್ದೇಶದಿಂದ ಉಳಿದ ಮತಸ್ಥರು ಬಹಳಜನ ಕ್ರೈಸ್ತರಾಗಿ ಮತಾಂತರಿಸುತ್ತಿದ್ದಾರೆ.

ಈ ವಿಧವಾಗಿ ಒಂದೊಂದು ಜ್ಞಾನ ವಿಷಯವನ್ನು ಒಂದು ಗ್ರಂಥಕ್ಕೇ ಪರಿಮಿತಿ ಮಾಡಿ "ನಮ್ಮ ಗ್ರಂಥದಲ್ಲಿಯೇ ಈ ವಿಷಯವಿದೆ, ನಮ್ಮ ದೇವರೇ ಈ ವಿಷಯವನ್ನು ಹೇಳಿದ್ದಾನೆ" ಎಂದು ಕೆಲವರು ಹೇಳುತ್ತಿದ್ದಾರೆ, ಯಾವ ಜ್ಞಾನ ವಿಷಯವಾದರೂ ಅದು ಮೂರು ಗ್ರಂಥಗಳಲ್ಲಿಯೂ ಇರುವುದೆಂದೂ, ಯಾವ ಗ್ರಂಥದಲ್ಲಿ ಕಾಣಿಸಿರುವ ಜ್ಞಾನ ವಿಷಯವಾದರೂ, ಪ್ರಪಂಚದಲ್ಲಿ ಎಲ್ಲರಿಗೂ ದೇವರಾದವನು ಒಬ್ಬನೇ ಆ ವಿಷಯವನ್ನು ಹೇಳಿದ್ದಾನೆಂದು, ದೇವರು ಒಂದು ಕುಲಕ್ಕೋ, ಒಂದು ಮತಕ್ಕೋ, ಒಂದು ದೇಶಕ್ಕೋ ಪರಿಮಿತಿ ಯಾದವನಲ್ಲವೆಂದೂ, 'ವಿಶ್ವ' ಎಂಬ ಸಾಮ್ರಾಜ್ಯವೆಲ್ಲದಕ್ಕೂ ದೇವರು ಒಬ್ಬನೇ ಚಕ್ರವರ್ತಿ ಎಂದು ಬಹಳಜನ ಅಂದುಕೊಳ್ಳುತ್ತಿಲ್ಲ. ಪ್ರಪಂಚದಲ್ಲಿರುವುದು ಹನ್ನೆರಡು ಮತಗಳೇ, ಅದರಲ್ಲಿ ಮುಖ್ಯವಾದವು, ದೊಡ್ಡವು ಮೂರು ಮಾತ್ರವೇ. ಮೂರು ಮತಗಳು ಬೇರೆಬೇರೆ ಹೆಸರುಗಳು, ಬೇರೆಬೇರೆ ಆಚರಣೆಗಳು ಹೊಂದಿದ್ದರೂ ಮೂರಕ್ಕೂ ಒಬ್ಬನೇ ದೇವರು, ಒಂದೇ ಜ್ಞಾನವಿದೆ. ಪ್ರಪಂಚದಲ್ಲಿನ ಹನ್ನೆರಡು ಮತಗಳಿಗೆ ಸಹ ಅಧಿಪತಿ ದೇವರೇ ಆದರೂ, ಉಳಿದ ಒಂಭತ್ತು ಮತದವರು ಅವರು ಸ್ವತಃವಾಗಿ ತಮ್ಮ ಮತ ಜ್ಞಾನವನ್ನು ತಯಾರಿ ಮಾಡಿಕೊಂಡಿದ್ದಾರೆ. ಆದ್ದರಿಂದ ಉಳಿದ ಒಂಭತ್ತು ಮತಗಳವರು ಬೇರೆಬೇರೆ ವಿಧಾನಗಳಲ್ಲಿ ಬೇರೆಬೇರೆ ಆಚರಣೆಗಳಲ್ಲಿ ಇದ್ದಾರೆ. ಅವರಿಗೆ ಮೂರು ಮತಗಳಲ್ಲಿನ ಜ್ಞಾನದೊಂದಿಗೆ ಸಂಬಂಧವಿಲ್ಲ.

ಮೂರುಮತಗಳಾಗಲಿ ಉಳಿದ ಒಂಭತ್ತು ಮತಗಳಾಗಲೀ 5000 ವರ್ಷಗಳ ಪೂರ್ವವು ಇಲ್ಲವೇಇಲ್ಲ. ಕೃತಯುಗ, ತ್ರೇತಾಯುಗ, ದ್ವಾಪರಯುಗ ಕಳೆದ ನಂತರ ಕಲಿಯುಗದಲ್ಲಿ (3000) ಮೂರು ಸಾವಿರ ವರ್ಷಗಳು ಕಳೆದ ನಂತರ ಮತವೆನ್ನುವುದು ಹುಟ್ಟಿದೆ. ಮತ ಒಂದು ದೇಶಕ್ಕೋ, ಒಂದು ಪ್ರದೇಶಕ್ಕೋ ಪರಿಮಿತಿಯಾಗಿರುವಾಗ, ಮತದಲ್ಲಿ ವರ್ಗಗಳು ಸಹ ಬಂದಿವೆ. ಮತದಲ್ಲಿ ಸೀಳಿಕೆಗಳು ಅಥವಾ ವರ್ಗಗಳ ಮಧ್ಯ ಅಂತರ್ಯುದ್ಧಗಳು ಶುರುವಾಗಿ ಅಲ್ಲಲ್ಲಿ ಒಂದೇ ಮತದಲ್ಲಿನವರೇ ನಿನ್ನದು ಬೇರೆ ವರ್ಗ, ನನ್ನದು ಬೇರೆವರ್ಗ ಎಂದು, ನಿನ್ನ ವರ್ಗಕ್ಕಿಂತಲೂ ನನ್ನ ವರ್ಗವೇ ದೊಡ್ಡದೆಂದೂ, ಅಧಿಕಾರ ಹೋರಾಟ ಮಾಡುತ್ತಿದ್ದರು. ಉದಾಹರಣೆಗೆ ಹಿಂದೂಮತದಲ್ಲಿ ಅದ್ವೈತ, ವಿಶಿಷ್ಠಾದ್ವೈತ ಎಂಬ ಎರಡು ವರ್ಗಗಳು ಇದ್ದವು. ಮೊದಲನೆಯದು ಅದ್ವೈತವಾಗಿರುವಾಗ, ಆ ನಂತರ ಬಂದಿರುವುದು ವಿಶಿಷ್ಠಾದ್ವೈತ. ಶಂಕರಾಚಾರ್ಯರವರು ಅದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿದರೆ, ರಾಮಾನುಜಾಚಾರ್ಯರವರು ವಿಶಿಷ್ಠಾದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿದ್ದಾರೆ. ಮೊದಲು ಬಂದಿರುವ ಅದ್ವೈತರು ನಂತರ ಬಂದಿರುವ ವಿಶಿಷ್ಠಾದ್ವೈತರೊಂದಿಗೆ ಘರ್ಷಣೆ ಬೀಳುತ್ತಿದ್ದರು. ಅದ್ವೈತರು, ವಿಶಿಷ್ಠಾದ್ವೈತರ ಮೇಲೆ ಹೆಚ್ಚಾಗಿ ದಾಳಿ ಮಾಡಿದಂತೆ ಚರಿತ್ರೆ ಇದೆ. ಅದ್ವೈತರ ದಾಳಿಗೆ ತಡೆಯಲಾರದೆ ವಿಶಿಷ್ಠಾದ್ವೈತ ಸಿದ್ಧಾಂತಕರ್ತನಾದ ರಾಮಾನುಜಚಾರ್ಯರವರು ಬಚ್ಚಿಟ್ಟುಕೊಂಡು ಬದುಕುತಿದ್ದರು. ಹೀಗೆ ಮೊದಲು ಒಂದೇ ಮತವಾದ ಹಿಂದೂ ಮತದಲ್ಲಿ ವರ್ಗಗಳ ಮಧ್ಯ ಅಂತರ್ಯುದ್ಧಗಳು ಶುರುವಾಗಿವೆ ಎಂದು, ಅಲ್ಲಿ ಮೊದಲಾದ ಅಸೂಯೆ, ದ್ವೇಷವಾಗಿ ಕೊನೆಗೆ ಮತಗಳ ಮಧ್ಯ ಬೆಂಕಿ ಇಡುವುದಕ್ಕೆ ಪ್ರಾರಂಭಿಸಿದೆ.

ಮೂರು ಮತಗಳಲ್ಲಿರುವುದು ಒಂದೇ ಜ್ಞಾನ, ಹೇಳಿರುವವನು ಒಬ್ಬನೇ ದೇವರಾದರೂ, ಒಂದೇ ಜ್ಞಾನವನ್ನು ಮೂರು ಮತದವರು ಬೇರೆಬೇರೆ ಕಾಗದಗಳಾಗಿ ಕಿತ್ತುಕೊಂಡು ಇದು ನಮ್ಮ ಗ್ರಂಥವೆಂದು ಹೇಳಿಕೊಳ್ಳುತ್ತಿದ್ದಾರೆ. 'ನಮ್ಮ ಗ್ರಂಥ ಬೇರೆ' ಎಂಬ ಮಾತು ಬಂದಾಗ ಅದರ ಹಿಂದೆಯೇ 'ನಮ್ಮ

ಜ್ಞಾನ ಬೇರೆ', 'ನಮ್ಮ ದೇವರು ಬೇರೆ' ಎಂಬ ಮಾತು ಬರುವುದು ನಡೆಯುತ್ತಿದೆ. ಅದರಿಂದ ಮತಕ್ಕು ಮತಕ್ಕು ಮಧ್ಯ ಭೇದಾಭಿಪ್ರಾಯಗಳು ಬರುವುದು, ಆ ಭೇದಾಭಿಪ್ರಾಯಗಳಿಂದ ಅಸೂಯೆ ಗುಣ ಬರುವುದು, ಅಸೂಯೆ ಗುಣದಿಂದ ಕೋಪವೆಂಬ ಗುಣವು ಉದ್ರೇಕವಾಗಿಹೋಗುವುದೂ, ಕೋಪದಿಂದ ಹಿಂಸೆ ನಡೆಯುವುದು ಸಹಜವಾಗಿಹೋಗಿದೆ. ಭಾರತದೇಶದಲ್ಲಿ 'ಭಗವದ್ಗೀತೆ'ಯೆಂದೂ, ಇತರ ದೇಶಗಳಲ್ಲಿ 'ತೌರಾತ್' ಎಂದೂ ಕರೆಯಲ್ಪಡುವ ಗ್ರಂಥದಲ್ಲಿನ ಜ್ಞಾನವೇ ಉಳಿದ ಎರಡು ಗ್ರಂಥಗಳಲ್ಲಿ ಇದೆ. ಕೆಲವು ದೇಶಗಳಲ್ಲಿ ಇಂಜೀಲು ಎಂದೂ, ಕೆಲವು ದೇಶಗಳಲ್ಲಿ ಬೈಬಲ್ ಎಂದೂ ಕರೆಯಲ್ಪಡುವ ಗ್ರಂಥವಾಗಲೀ, ಹಾಗೆಯೇ ಕೊನೆಯ ಗ್ರಂಥವಾದ ಖುರಾನ್ ಆಗಲೀ ತೌರಾತ್ ಜ್ಞಾನದೊಂದಿಗೆ ಕೂಡಿಕೊಂಡಿವೆ. ಒಂದೇ ಹಿಂದೂ ಮತದಲ್ಲಿ ಸಿದ್ಧಾಂತಗಳು ಬೇರೆಯಾಗಿರುವುದರಿಂದ ಬೇರೆಬೇರೆ ವರ್ಗಗಳು ಏರ್ಪಟ್ಟಂತೆ, ವಿಶ್ವಜ್ಞಾನವಾದ ಭಗವದ್ಗೀತೆಯಿಂದ ಆಚರಣೆಗಳು ಬೇರೆಯಾದ ಉಳಿದ ಎರಡು ಮತಗಳು ಏರ್ಪಟ್ಟಿವೆ. ಮೊದಲು ಹಿಂದೂ ಮತವೆಂಬ ಹೆಸರೇ ಇಲ್ಲ. ಚರಿತ್ರೆಯಲ್ಲಿ ಇಂದೂಗಳು ಎನ್ನುವವರು ಮಾತ್ರವೇ ಇರುತ್ತಿದ್ದರು. ಯಾವಾಗಾದರೇ ಕ್ರೈಸ್ತ ಮತವು ಏರ್ಪಟ್ಟಿದೆಯೋ ಆಗ ಇಂದೂಗಳನ್ನು ಇಂದೂಮತಸ್ಥರು ಎಂದಿದ್ದಾರೆ. ಈ ಮಧ್ಯ ಕೆಲವು ನೂರು ವರ್ಷಗಳ ಕೆಳಗೆ ಇಂದೂಗಳ ಅಜ್ಞಾನ ಬೆಳೆದುಹೋಗಿ ಕೊನೆಗೆ ತಮ್ಮನ್ನು 'ಹಿಂದೂಗಳು' ಎಂಬ ಹೆಸರಿನಿಂದ ಕರೆದುಕೊಳ್ಳುವುದಕ್ಕೆ ಅಭ್ಯಾಸವಾಗಿ ಹೋಗಿದ್ದಾರೆ. ವಾಸ್ತವವಾಗಿ 'ಹಿಂದೂ' ಎಂಬ ಪದಕ್ಕೆ ಅರ್ಥವೇ ಇಲ್ಲ. ಎಷ್ಟೋ ದೊಡ್ಡ ಜ್ಞಾನದಲ್ಲಿದ್ದು ತಮ್ಮಲ್ಲಿನ ಜ್ಞಾನಕ್ಕೆ ಚಿಹ್ನೆಯಾಗಿ 'ಇಂದೂ' ಎಂದು ಹೆಸರಿಟ್ಟುಕೊಂಡವರು, ಕೊನೆಗೆ ಕಾಲಕ್ರಮದಲ್ಲಿ ಹಿಂದೂಗಳಾಗಿ ಬದಲಾಗಿಹೋಗಿದ್ದಾರೆ. ವಾಸ್ತವವಾಗಿ ಹಿಂದೂ ಪದಕ್ಕೆ ಅರ್ಥವಾಗಲೀ, ನಿರ್ವಚನೆಯಾಗಲೀ ಇಲ್ಲ. ಅದೇ ವಿಷಯವನ್ನೇ ನಾವು ಬಹಳಕಾಲದಿಂದ ಹೇಳುತ್ತಿದ್ದೇವೆ. ಹಿಂದೂಗಳೆಲ್ಲರೂ ಹಿಂದಿನ ಕಾಲದಲ್ಲಿ ಇಂದೂಗಳಾಗಿ ಇದ್ದವರೆಂದು ಹೇಳಿದರೂ, ಇಂದಿನ ಹಿಂದೂ ಸಮಾಜದಲ್ಲಿನ ಕೆಲವರು ನಮ್ಮ ಮಾತನ್ನು ಅವಹೇಳನವಾಗಿ ತೆಗೆದುಕೊಂಡಿದ್ದಾರೆ. ಯಾರು ಏನೆಂದರೂ

ನಮ್ಮ ಮಾತು ವಾಸ್ತವವೆನ್ನುವುದಕ್ಕೆ ಈ ಮಧ್ಯೆ ವಾರ್ತಾಪತ್ರಿಕೆಯಲ್ಲಿ ಬಂದ ವಾರ್ತೆಯನ್ನು ಪಕ್ಕದ ಪುಟದಲ್ಲಿ ನೋಡಿದರೇ ಅರ್ಥವಾಗುತ್ತದೆ.

ನೋಡಿದ್ದೀರಲ್ಲ ನ್ಯಾಯಸಮ್ಮತವಾಗಿ ಹಿಂದೂಪದಕ್ಕೆ ಸರಿಯಾದ ನಿರ್ವಚನವೇ ಇಲ್ಲವೆಂದು ಕೇಂದ್ರಸರ್ಕಾರವೇ ತೀರ್ಮಾನಿಸಿ ಹೇಳಿದಾಗ, ನಾವೆಲ್ಲಾ ಇಂದೂಗಳೇ ಎಂದು ಈಗಾದರೂ ಒಪ್ಪಿಕೊಳ್ಳಬಹುದಲ್ಲವೇ! ಇಂದೂ ಎಂದರೇ ಜ್ಞಾನಿ ಎಂದು ಅರ್ಥವಿದೆ. ಮೊದಲು ಭಾರತ ದೇಶದಲ್ಲಿ ಎಲ್ಲರೂ ಜ್ಞಾನಿಗಳಾಗಿ ಇರುತ್ತಿದ್ದರಿಂದ ಆಗ ಆ ದೇಶವನ್ನು 'ಜ್ಞಾನಿಗಳ ದೇಶ' ಎನ್ನುತ್ತಿದ್ದರು. ಜ್ಞಾನಿಗಳಿಗೆ ಚಿಹ್ನೆ ಚಂದ್ರನಾದ್ದರಿಂದ, ಚಂದ್ರನ ಹೆಸರು 'ಇಂದೂ' ಎಂದು ಇರುವುದರಿಂದ, ಜ್ಞಾನಿಗಳಿಗೆ ಗುರುತಾಗಿ ಎಲ್ಲರನ್ನೂ ಇಂದೂಗಳೆಂದೂ, ಇಂದೂಗಳಿರುವ ದೇಶವನ್ನು 'ಇಂದೂದೇಶವೆಂದು' ಹೇಳುತ್ತಿದ್ದರು. ಇಂದಿನ ಹಿಂದೂಗಳಿಗೆ ಗತಚರಿತ್ರೆಯೇ ತಿಳಿಯದೇ ಹೋಗಿದೆ. ಒಂದೇ ಭಗವದ್ಗೀತೆ ಜ್ಞಾನವು ಪ್ರಪಂಚವೆಲ್ಲಾ ವ್ಯಾಪಿಸಿದೆ ಎಂದು ಹೇಳುವುದಕ್ಕೆ ಭಗವದ್ಗೀತೆಯಲ್ಲಿನ ಜ್ಞಾನವೇ ಉಳಿದ ಎರಡು ಗ್ರಂಥಗಳಲ್ಲಿ ಸಹ ಇದೆ. ಆ ವಿಷಯ

**(ಅನಂತಪುರಂ/ಸೋಮವಾರ/ಅಕ್ಟೋಬರ್–12–10–2015,**
**ಸಾಕ್ಷಿ ನ್ಯೂಸ್ ಪೇಪರ್)**

# 'ಹಿಂದೂ ಪದಕ್ಕೆ ನಿರ್ವಚನೆ ತಿಳಿದಿಲ್ಲ'

**ಇಂಡೋರ್: ರಾಜ್ಯಾಂಗ, ನ್ಯಾಯಪರವಾಗಿ ಹಿಂದೂ ಪದಕ್ಕೆ ನಿರ್ವಚನೆ ತಿಳಿದಿಲ್ಲವೆಂದು ಕೇಂದ್ರ ಹೋಂಶಾಖೆ ತೀರ್ಮಾನಿಸಿದೆ. ಹಿಂದೂ ಪದ ನಿರ್ವಚನೆ ಹೇಳಬೇಕಾಗಿ ಮಧ್ಯಪ್ರದೇಶ್‌ಗೆ ಸೇರಿದ ಚಂದ್ರಶೇಖರ್‌ಗೌರ್ ಎನ್ನುವ ವ್ಯಕ್ತಿ ಸಮಾಚಾರ ಹಕ್ಕು ಕಾನೂನಿಗೆ ಮಾಡಿಕೊಂಡಿರುವ ಅರ್ಜಿಗೆ ಉತ್ತರನೀಡುತ್ತಾ ಹೋಂಶಾಖೆ ಮೇಲಿನ ವಿಧವಾಗಿ ಸ್ಪಂದಿಸಿದೆ. ಆ ಪದಕ್ಕೆ ಸಂಬಂಧಿಸಿದ ಎಂತಹ ಸಮಾಚಾರವಿಲ್ಲವೆಂದು ಕೇಂದ್ರ ಪೌರಸಂಬಂಧಗಳ ಶಾಖಾಧಿಕಾರಿ ನಮೂದಿಸಿದ ಹಾಗೆ ಕೇಂದ್ರವು ತಿಳಿಸಿದೆ. ಎಂತಹ ನಿರ್ವಚನೆ ಇಲ್ಲದಿರುವಾಗ ಇಂತಹ**

**ವರ್ಗದವರು ಹಿಂದೂಗಳೆಂದು ಹೇಗೆ ನಿರ್ಧಾರಿಸುತ್ತಿದ್ದಾರೆಂದು, ದೇಶದಲ್ಲಿ ಹಿಂದೂಗಳು ಮೆಜಾರಿಟಿಯಾಗಿ ಇದ್ದಾರೆಂದು ಹೇಗೆ ಹೇಳುತ್ತಿದ್ದಾರೆಂದು ಗೌರ್ ಪ್ರಶ್ನಿಸಿದ್ದಾರೆ.**

ಅಂತಿಮ ದೈವಗ್ರಂಥದಲ್ಲಿ ಐದನೆಯ ಸೂರಾದಲ್ಲಿ ಸಹ ಹೇಳಲ್ಪಟ್ಟಿದೆ. ಆದರೂ ಆ ವಿಷಯವು ಮೂರು ಮತಗಳವರಿಗೆ ತಿಳಿಯದೇ ಹೋಗಿರುವುದರಿಂದ, ಒಂದೇ ವಿಷಯವನ್ನೇ ಬೇರೆಬೇರೆಯಾಗಿ ಅರ್ಥ ಮಾಡಿಕೊಳ್ಳುವುದರಿಂದ, ಮತಕ್ಕು ಮತಕ್ಕು ಮಧ್ಯ ದೊಡ್ಡಬಿರುಕು ಏರ್ಪಟ್ಟಿದೆ. ಮನುಷ್ಯರಿಗೆ ಮನುಷ್ಯರಿಗೆ ಮಧ್ಯ ಅಸೂಯೆ ಏರ್ಪಟ್ಟಿವೆ. ಅಪಾರ್ಥದಿಂದ ಮೊದಲಾದ ಅಸೂಯೆಗಳು ತಾರಾಮಟ್ಟಕ್ಕೇರಿ "ನಾವೆಲ್ಲರೂ ಒಂದೇ ಜಾತಿ ಮನುಷ್ಯರು" ಎಂಬ ಮಾತನ್ನು ಮರೆತುಹೋಗಿ, ನಾವೆಲ್ಲರೂ ಒಂದೇ ದೇವರ ಸಂತತಿಯೆಂದು (ಸೃಷ್ಠಿಯೆಂದು) ಮರೆತುಹೋಗಿ, ಒಬ್ಬರನ್ನೊಬ್ಬರು ಶತ್ರುಗಳಾಗಿ ನೋಡಿಕೊಳ್ಳುತ್ತಿದ್ದಾರೆ. ಹೊಸದಾಗಿ ಹುಟ್ಟುವವರು ಸಹ ಸ್ವಲ್ಪವಾದರೂ ಆಲೋಚಿಸದೆ ಅದೇ ಅಸೂಯೆಗಳಲ್ಲಿಯೇ ಇದ್ದಾರೆ.

ಇಂದೂ ಸಮಾಜದಲ್ಲಿ ತ್ರೇತಾಯುಗದಲ್ಲಿಯೇ ಕುಲಗಳ ಕಿಡಿ ಹುಟ್ಟುಕೊಂಡಿದೆ. ಭಾರತದೇಶದೊಳಗೆ ಮಧ್ಯ ಏಷ್ಯಾದಿಂದ ಬಂದ ಆರ್ಯರು ತಮ್ಮ ಅಧಿಕಾರವನ್ನು ಚಲಾಯಿಸುವುದಕ್ಕೆ, ತಮ್ಮನ್ನು ಆರ್ಯ ಬ್ರಾಹ್ಮಣರಾಗಿ ಹೇಳಿಕೊಳ್ಳುತ್ತಾ, ಉಳಿದವರೆಲ್ಲರನ್ನು ನೀಚವಾಗಿ ನೋಡುತ್ತಿದ್ದರು. ಅದಕ್ಕು ಮೊದಲು ಎಷ್ಟೋ ದೈಜ್ಞಾನದಿಂದ ಕೂಡಿಕೊಂಡಿರುವ ದ್ರಾವಿಡ ಬ್ರಾಹ್ಮಣರನ್ನು ಸಹ ದೈವಧರ್ಮಗಳಿಗೆ ವಿರುದ್ಧವಾದ ಕಾರ್ಯಗಳನ್ನೇ ಮಾಡುವಂತೆ ಮಾಡಿ ಇಂದೂಗಳಲ್ಲಿ ಜ್ಞಾನವೆನ್ನುವುದು ಇಲ್ಲದಂತೆ ಮಾಡಿದ್ದಾರೆ. ಅಂದಿನಿಂದ ಆರಂಭವಾದ ಕುಲವ್ಯವಸ್ಥೆಗಳೊಂದಿಗೆ ಸಮಾನವಾಗಿರುವ ಮನುಷ್ಯರನ್ನು ಹೆಚ್ಚುಕಡಿಮೆ ಮಾಡಿದ್ದಾರೆ. 'ಈ ಕುಲದವನು ಆ ಕುಲದವನಿಗಿಂತಲೂ ದೊಡ್ಡವನು ಎಂಬ' ಭಾವನೆಯನ್ನು ತಂದು ಕೊನೆಗೆ ಎಲ್ಲಾ ಕುಲಗಳಿಗಿಂತಲೂ ಬ್ರಾಹ್ಮಣರೇ ದೊಡ್ಡವರೆಂದು ಪ್ರಚಾರ ಮಾಡಿದ್ದಾರೆ. ಮಧ್ಯ ಏಷ್ಯಾದಿಂದ ವಲಸೆ

ಬಂದವರು ಎಷ್ಟೋ ಜ್ಞಾನವಂತವಾದ ಇಂದೂ ದೇಶದಲ್ಲಿ ಮೊದಲು 'ಕುಲ' ಎಂಬ ಅಜ್ಞಾನ ಬೆಂಕಿ ಇಟ್ಟಾಗ ಕೊನೆಗದು ಬುನಾದಿಯಾಗಿ ಬದಲಾಗಿಹೋಗಿದೆ. ಇಂದೂ ಸಮಾಜವು ಎರಡುಸಾವಿರ ವರ್ಷಗಳ ಪೂರ್ವದಲ್ಲಿ ಇಂದೂಮತವಾಗಿ ಬದಲಾಗಿಹೋಗಿ, ಕೊನೆಗೆ ಕೆಲವು ನೂರು ವರ್ಷಗಳಿಂದ ಪೂರ್ತಿ ಹೆಸರು ಬದಲಾಗಿರುವುದಾಗಿ 'ಇಂದೂ' ಸ್ಥಾನದಲ್ಲಿ 'ಹಿಂದೂ' ಪದ ಬಂದು ಸೇರಿದಾಗ, ಹಿಂದೂ ಮತವಾಗಿ ತಯಾರಾಗಿದೆ.

ಇಂದೂ ಮತದಲ್ಲಿ ಸುಮಾರು ಎರಡುಸಾವಿರ ವರ್ಷಗಳ ಪೂರ್ವವು ಅಶೋಕ ಚಕ್ರವರ್ತಿ ಪ್ರಚಾರಮಾಡಿದ ಬೌದ್ಧತತ್ವವನ್ನು ಅಡಗಿಸಿಹಾಕುವುದಕ್ಕೆ, ಆದಿಶಂಕರಾಚಾರ್ಯರು ಕೇರಳ ರಾಷ್ಟ್ರದಿಂದ ಹೊರಗೆ ಬಂದು, ಬುದ್ಧನ ಜ್ಞಾನದಕಡೆ ಯಾರೂ ಹೋಗದೆ ಇರುವುದಕ್ಕೆ, ಅದಕ್ಕು ಮೊದಲಿನಿಂದ ಇಂದೂ ಸಮಾಜದಲ್ಲಿರುವ ಬುದ್ಧನನ್ನೇ ಹಿಂದೂ ಅಲ್ಲವೆಂದು, ಅತನ ಬೋಧನೆಗಳು ಇಂದೂತ್ವವಕ್ಕೆ ಸಂಬಂಧಿಸಿರುವವಲ್ಲವೆಂದು, ಬುದ್ಧನನ್ನು ಅನ್ಯಮತ ಪ್ರಚಾರಕನೆಂದು ವರ್ಣಿಸಿ, ತಾನು ಇಂದೂಮತವನ್ನು ಉದ್ಧರಿಸುವುದಕ್ಕೆ ಬಂದಿದ್ದೇನೆಂದು, ಅದ್ವೈತ ಸಿದ್ಧಾಂತವನ್ನು ಬುದ್ಧನ ಬೋಧನೆಗೆ ವಿರುದ್ಧವಾಗಿ ಇರುವಂತೆ ಪ್ರಚಾರ ಮಾಡಿದ್ದಾರೆ. ಈ ವಿಧವಾಗಿ ಆದಿಶಂಕರಾಚಾರ್ಯರೊಂದಿಗೆ ಹಿಂದೂಮತದಲ್ಲಿ ಬಿರುಕು ಬಂದಿದೆ. ಇದೆಲ್ಲವೂ ಒಳಸಂಚಿನ ಪ್ರಕಾರ ಆರ್ಯರು ಶಂಕರಾಚಾರ್ಯರಿಂದ ಮಾಡಿಸಿದ ಕೆಲಸವೆಂದು ಯಾರೂ ಗ್ರಹಿಸಲಾರದೆ ಹೋಗಿದ್ದಾರೆ. ಅಲ್ಲಿಂದ ಬಿರುಕಿನ ಪರ್ವ ಆರಂಭಗೊಂಡು ಸ್ವಲ್ಪಕಾಲಕ್ಕೆ ವಿಶಿಷ್ಟಾದ್ವೈತ ಸಿದ್ಧಾಂತವು ರಾಮಾನುಜಾಚಾರ್ಯರಿಂದ ಹೊರಗೆ ಬಂದಿದೆ. ಆಗಲೇ ಅದ್ವೈತರು ವಿಶಿಷ್ಟಾದ್ವೈತರ ಮೇಲೆ ಅಸೂಯೆಯನ್ನು ಬೆಳೆಸಿಕೊಂಡಿದ್ದಾರೆ. ಶಂಕರಾ ಚಾರ್ಯನು ಅದ್ವೈತ ಸಿದ್ಧಾಂತವನ್ನು ಹೇಳಿದರೂ, ತ್ರಿಮೂರ್ತಿಗಳಲ್ಲಿ ಒಬ್ಬನಾದ ಶಿವನನ್ನು ಆರಾಧಿಸುತ್ತಾ ಶೈವರಾಗಿ ಇರುತ್ತಿದ್ದರು. ನಂತರ ಬಂದ ರಾಮಾನುಜಾಚಾರ್ಯರವರು ವಿಶಿಷ್ಠಾದ್ವೈತ ಸಿದ್ಧಾಂತವನ್ನು ಹೇಳಿದರೂ, ತ್ರಿಮೂರ್ತಿಗಳಲ್ಲಿ ಒಬ್ಬನಾದ ವಿಷ್ಣುವನ್ನು ಆರಾಧಿಸುತ್ತಾ ತಮ್ಮನ್ನು ವೈಷ್ಣವರಾಗಿ

ಹೇಳಿಕೊಳ್ಳುತ್ತಿದ್ದರು. ಒಂದೇ ಇಂದೂಮತದಲ್ಲಿ ಶೈವರು ವೈಷ್ಣವರು ನಾವು ದೊಡ್ಡವರೆಂದು, ನಮ್ಮ ಜ್ಞಾನ ದೊಡ್ಡದೆಂದು ಒಬ್ಬರಿಗೊಬ್ಬರು ಘರ್ಷಣೆ ಬೀಳುತ್ತಿದ್ದರು. ಅದರಿಂದ ಅವರು ಧರಿಸುವ ನಾಮ ಬೇರೆ, ಅವರು ಪೂಜಿಸುವ ದೇವರು ಬೇರೆಯಾಗಿ ಹೋಗಿದ್ದಾರೆ.

ಕಲಿಯುಗದಲ್ಲಿ ದೇವತೆಗಳಲ್ಲಿ ಸಹ ಶೈವ, ವೈಷ್ಣವ ದೇವತೆಗಳೆಂದು ಎರಡಾಗಿ ವಿಂಗಡಿಸಲ್ಪಟ್ಟಿದ್ದಾರೆ. ಅದರಿಂದ ಶಿವ ಭಕ್ತರು, ವಿಷ್ಣು ಭಕ್ತರೆಂದು ಹೇಳಿಕೊಳ್ಳುವುದು ಮೊದಲಾಯಿತು. ಅದಕ್ಕು ಮೊದಲು ಚರಿತ್ರೆಯಲ್ಲಿ ಭಾರತದೇಶವೆಲ್ಲಾ ಎಷ್ಟೋ ಆಧ್ಯಾತ್ಮಿಕಕ್ಕೆ ನಿಲಯವಾಗಿ ಇಂದೂದೇಶವಾಗಿ ಹೆಸರುವಾಸಿಯಾಗಿದೆ. ತಮ್ಮಲ್ಲಿನ ಜ್ಞಾನವನ್ನು ಕಳೆದುಕೊಂಡು, ಪ್ರಪಂಚವೆಲ್ಲದಕ್ಕೂ ಎಲ್ಲರಿಗೂ ಸೃಷ್ಟಿಕರ್ತ ಆದವನೇ ದೊಡ್ಡವನೆಂಬ ಜ್ಞಾನವನ್ನು ಮರೆತುಹೋಗಿ, ದೇವರಿಂದ ಸೃಷ್ಟಿಸಲ್ಪಟ್ಟ ದೇವತೆಗಳನ್ನು ದೊಡ್ಡದಾಗಿ ಇಟ್ಟುಕೊಳ್ಳುವುದು ನಡೆದಿದೆ. ಈ ವಿಧವಾಗಿ ಶುರುವಾದ ಒಂದೇಮತ ಸೀಳಿಕೆಗಳಲ್ಲಿ ಅದ್ವೈತ, ವಿಶಿಷ್ಟಾದ್ವೈತ ಎನ್ನುವವುಗಳಲ್ಲಿ ಅಸೂಯೆಗಳು ಶುರುವಾಗಿ ಕೊನೆಗೆ ದಾಳಿಗಳವರೆಗು ಹೋಗಿ, ಒಬ್ಬರನ್ನೊಬ್ಬರು ಸಾಯಿಸಿಕೊಳ್ಳುವುದು ನಡೆದಿದೆ. ಈ ವಿಷಯವನ್ನು ಗತಚರಿತ್ರೆಯಲ್ಲಿ ನಡೆದ ಸಂಘಟನೆಗಳನ್ನು "ದಶಾವತಾರಂ" ಎಂಬ ತೆಲುಗು ಚಲನಚಿತ್ರದಲ್ಲಿ (ಸಿನಿಮಾದಲ್ಲಿ) ಸಹ ತೋರಿಸುವುದು ನಡೆದಿದೆ. ಹೀಗೆ ಇಂದೂ ಮತದಲ್ಲಿ ಮೊದಲಾದ ವಿಧಾನವೇ ಉಳಿದ ಮತಗಳಲ್ಲಿ ಸಹ ಬಂದಿದೆ. ಮತಗಳು ತಯಾರಾದ ನಂತರ ವಾಸ್ತವ ದೈವ ಜ್ಞಾನವಿರುವವು ಮೂರು ಮತಗಳಾಗಿಯೇ ಗುರುತಿಸಲ್ಪಟ್ಟಿವೆ. ಮೂರು ಮತಗಳು ಸೃಷ್ಟಿ ಆದಿಯಲ್ಲಿ ಹೇಳಿರುವ ಜ್ಞಾನವನ್ನು ಅನುಸರಿಸಿಯೇ ಇವೆ. ದೇವರು ಸೃಷ್ಟಿ ಆದಿಯಲ್ಲಿ ಹೇಳಿರುವ ಜ್ಞಾನವು ಕೊನೆಗೆ ಮೂರು ಗ್ರಂಥಗಳಾಗಿ ಮೂರು ಮತಗಳಲ್ಲಿ ಕಾಣಿಸುತ್ತಿದೆ. ಈದಿನ ಹಿಂದೂ, ಕ್ರೈಸ್ತವ, ಇಸ್ಲಾಮ್ ಮತಗಳಾಗಿ ಹೇಳಲ್ಪಡುತ್ತಿರುವ ಅವುಗಳಿಗೆ ಹಿಂದೂಗಳಿಗೆ 'ಭಗವದ್ಗೀತೆ', ಕ್ರೈಸ್ತರಿಗೆ 'ಬೈಬಲ್' ಮುಸ್ಲಿಮ್‌ಗಳಿಗೆ 'ಖುರಾನ್' ಗ್ರಂಥವು ಆಧಾರವಾಗಿವೆ. ಮೂರು ಗ್ರಂಥಗಳಲ್ಲಿಯೂ ಒಂದೇ

ದೈವಜ್ಞಾನವು ಇರುವಾಗ, ಅದನ್ನು ಮೂರು ಮತದವರು ಗ್ರಹಿಸದೆ, ನಮ್ಮ ಜ್ಞಾನವು ದೊಡ್ಡದೆಂದು ಉಳಿದ ಎರಡು ಮತಗಳೊಂದಿಗೆ ವಾದಿಸುತ್ತಿದ್ದಾರೆ. ಹೇಳಿರುವವನು ಒಬ್ಬನೇ ದೇವರೆಂದು, ಹೇಳಲ್ಪಟ್ಟಿರುವುದು ಒಂದೇ ಜ್ಞಾನವೆಂದು, ತಿಳಿಯದ ಮನುಷ್ಯರು ತಮ್ಮ ಮತದ ಮೇಲೆ ಅಸೂಯೆ, ಕ್ರೋಧಗಳನ್ನು ಬೆಳೆಸಿಕೊಳ್ಳುತ್ತಿದ್ದಾರೆ. ಇತರ ಮತಗಳ ಅಸೂಯೆ ಕೊನೆಗೆ ಕ್ರೋಧವಾಗಿ, ಕ್ರೋಧವು ಹಿಂಸೆಯಾಗಿ ಬದಲಾಗುತ್ತಿದೆ. ಈ ದಿನ ಮತ ಸಂಬಂಧ ಹಿಂಸೆಗಳೇ ಭೂಮಿಮೇಲೆ ಅಧಿಕವಾಗಿ ಕಾಣಿಸುತ್ತಿವೆ. ಒಂದುಮತದವರು ಅನೇಕ ಗುಂಪುಗಳಾಗಿ ಬೇರೆಯಾಗಿ, ಆ ಗುಂಪುಗಳಿಗೆ ಪ್ರತ್ಯೇಕವಾದ ಹೆಸರುಗಳಿಟ್ಟು ಕೊಂಡು, ಹಿಂಸೆಗಳಿಗೆ ಪಾಲಾಗುತ್ತಿದ್ದಾರೆ. ನಂತರ ನಾವೇ ಆ ಕೆಲಸವನ್ನು ಮಾಡಿದ್ದೇವೆಂದು ಪ್ರಕಟಿಸಿಕೊಂಡಿದ್ದಾರೆ.

ಈದಿನ ಪರಮತದ್ವೇಶ ಎನ್ನುವುದು, ಸ್ವಮತಪ್ರೇಮ ಎನ್ನುವುದು ಒಂದು ಮತಕ್ಕೇ ಪರಿಮಿತಿ ಆಗಲಿಲ್ಲ. ನಾವು ಮುಖ್ಯವಾಗಿ ಹೇಳಿಕೊಳ್ಳುವ ಮೂರು ಮತಗಳಲ್ಲಿ ಇವೆ. ಪರಮತ ಅಸೂಯೆ ಎನ್ನುವುದು ಪ್ರತಿ ಮತದಲ್ಲಿದ್ದರೂ, ಕೆಲವು ಪ್ರತ್ಯಕ್ಷವಾಗಿ ಕಾಣಿಸುತ್ತಿವೆ, ಕೆಲವು ಪರೋಕ್ಷವಾಗಿ ಕಾಣಿಸುತ್ತಿವೆ. ಕೆಲವರು "ನಮ್ಮ ಮತದಲ್ಲಿ ಪರಮತ ಸಹನೆಯಿದೆ, ನಾವು ಎಲ್ಲರಿಗಿಂತಲೂ ಮತ ಸಾಮರಸ್ಯವಾಗಿ ಇರುತ್ತೇವೆ" ಎಂದು ಹೇಳುತ್ತಿರುತ್ತಾರೆ. ಪರಮತ ದ್ವೇಷವು ಇಂತಹ ಮತದಲ್ಲಿ ಹೆಚ್ಚಾಗಿದೆಯೆಂದು ಇತರ ಮತದಕಡೆ ಬೆರಳೆತ್ತಿ ತೋರಿಸುತ್ತಿರುತ್ತಾರೆ. ಆದರೂ ಅವರು ಹೇಳುವ ಮಾತು ವಾಸ್ತವವಲ್ಲವೆಂದು, ಪ್ರತಿ ಮತದಲ್ಲಿಯೂ ನೂರಕ್ಕೆ ನೂರುಪಾಲು ಪರಮತ ದ್ವೇಷವಿದೆಯೆಂದು ಹೇಳಬಹುದು. ಇಲ್ಲಿ ನಮ್ಮ ಮಾತನ್ನು ವಿಶ್ವಾಸಿಸದವರು ನಮ್ಮನ್ನು ಕೆಳಗಿನ ವಿಧವಾಗಿ ಪ್ರಶ್ನಿಸಬಹುದು.

**ಪ್ರಶ್ನೆ :– ಎಲ್ಲರಲ್ಲೂ ಪರಮತ ದ್ವೇಷವು ಹೆಚ್ಚು ಕಡಿಮೆ ಇಲ್ಲದೇ ನೂರಕ್ಕೆ ನೂರು ಶೇಕಡ ಇದೆಯೆಂದು ನೀವು ಯಾವ ಆಧಾರದಿಂದ ಹೇಳುತ್ತಿದ್ದೀರ? ಹಾಗಿದ್ದರೆ ಮುಸ್ಲಿಮ್‌ಗಳಹಾಗೆ ಹಿಂದೂಗಳು ಹಿಂಸೆಯಲ್ಲಿ ಪಾಲ್ಗೊಳ್ಳಲಿಲ್ಲ. ಹಿಂದೂಗಳ**

**ಹಾಗೆ ಕ್ರೈಸ್ತರು ಎಲ್ಲೂ ಇತರರ ಮೇಲೆ ದಾಳಿ ಮಾಡಲಿಲ್ಲ. ಮುಸ್ಲಿಮ್‌ಗಳಿಗಿಂತಲೂ ಹಿಂದೂಗಳು, ಹಿಂದೂಗಳಿಗಿಂತ ಕ್ರೈಸ್ತರು ಸೌಮ್ಯರಾಗಿ ಕಾಣಿಸುತ್ತಿದ್ದಾರೆ. ಪ್ರತ್ಯಕ್ಷವಾಗಿ ಕಾಣಿಸುವ ಸತ್ಯವು ಹೀಗಿರುವಾಗ ನೀವು ಎಲ್ಲ ಮತದವರು ಸಮಾನವಾಗಿ ಮತದ್ವೇಷಗಳು ಹೊಂದಿದ್ದಾರೆಂದು ಹೇಳುವುದರಲ್ಲಿ ಎಷ್ಟು ನಿಜವಿದೆಯೋ ತಿಳಿಯುತ್ತಿದೆ. ನೀವು ಸಹ ಅಸತ್ಯವನ್ನು ಹೇಳುತ್ತಿದ್ದೀರೆಂದು ನಾವು ಅಂದುಕೊಳ್ಳುತ್ತಿದ್ದೇವೆ. ಇದಕ್ಕೆ ನೀವೇನು ಹೇಳುವಿರಿ?**

**ಉತ್ತರ :–** ಕಾಣಿಸುವುದು ಸತ್ಯ, ಕಾಣಿಸದಿರುವುದು ಅಸತ್ಯ ಎಂದುಕೊಂಡರೇ ನಮ್ಮ ಬೆನ್ನು ನಮಗೇ ಕಾಣಿಸುವುದಿಲ್ಲ. ಕಾಣಿಸದಷ್ಟುಮಾತ್ರಕ್ಕೆ ನಮ್ಮ ಬೆನ್ನು ಅಸತ್ಯವಲ್ಲ ಅಲ್ಲವೇ! ಹಾಗೆಯೇ ಮುಸ್ಲಿಮ್‌ಗಳು ಮಾಡುವವು ಪ್ರತ್ಯಕ್ಷವಾಗಿ ಕಾಣಿಸುತ್ತಿರಬಹುದು. ಉಳಿದವರು ಮಾಡುವವು ಕಾಣಿಸದೆಯಿರಬಹುದು. ಒಬ್ಬ ಮುಸ್ಲಿಮ್ ಆತ್ಮಾಹುತಿ ದಾಳಿ ಮಾಡಿ ಇತರ ಮತದವರನ್ನು ನೂರು ಜನರನ್ನು ಕೊಂದಿದ್ದಾನೆಂದುಕೊಳ್ಳಿ. ಅದು ಪ್ರತ್ಯಕ್ಷ ಹಿಂಸೆ, ಆದ್ದರಿಂದ ಇಂತಹ ಮತದವನು ಮತದ್ವೇಷದಿಂದ ನೂರುಜನರನ್ನು ಕೊಂದಿದ್ದಾನೆಂದು ಹೇಳಬಹುದು. ಏಕೆಂದರೇ! ಅದು ಪ್ರತ್ಯಕ್ಷ ವಿಷಯವಾದ್ದರಿಂದ ಎಲ್ಲರಿಗೂ ತಿಳಿದಿದೆ. ಅದೇ ಒಬ್ಬ ಕ್ರೈಸ್ತನು ಪರೋಕ್ಷವಾಗಿ ತನ್ನ ತಿಳುವಳಿಕೆಯಿಂದ ಯಾರಿಗೂ ತಿಳಿಯದಂತೆ ಸಾವಿರಜನರನ್ನು ಇತರ ಮತಸ್ಥರನ್ನು ಸಾಯಿಸಿಸಿದ್ದಾನೆಂದುಕೊಳ್ಳಿ, ಆಗದು ಯಾರಿಗೂ ತಿಳಿದಿಲ್ಲ. ಹಿಂಸೆಮಾಡಿದವನು ಸಹ ಶಾಂತಸ್ವಭಾವದವನಾಗಿಯೇ ಕಾಣಿಸುತ್ತಾನೆ. ಯಾರ ಬುದ್ಧಿವಂತಿಕೆ ಅವರದು, ಒಬ್ಬರು ದಡ್ಡತನದಿಂದ ಹಿಂಸೆಮಾರ್ಗದಲ್ಲಿ ಪ್ರಯಾಣಿಸಿದರೇ, ಮತ್ತೊಬ್ಬನು ಎಷ್ಟೋ ಬುದ್ಧಿವಂತಿಕೆಯಿಂದ ತಾನು ಸಹ ಹಿಂಸೆಮಾರ್ಗದಲ್ಲಿಯೇ ಪ್ರಯಾಣಿಸುವನು ಆದರೇ ತಿಳುವಳಿಕೆಯಿಲ್ಲದೆ ಮಾಡಿದ ಅವನ ಕೆಲಸ ಹೊರಗೆ ಕಾಣಿಸುತ್ತಿದೆ. ಹೆಚ್ಚು ಬುದ್ಧಿವಂತಿಕೆಯಿಂದ ಮಾಡಿರುವ ಅವನ ಕೆಲಸ ಕಾಣಿಸುವುದಿಲ್ಲ. ಕೆಲವರಿಗೆ ಅಸೂಯೆ ಇದ್ದರೂ ಬುದ್ಧಿಬಲವಾಗಲೀ, ಶರೀರ ಬಲವಾಗಲೀ ಇಲ್ಲದವರಾಗಿ ಹಿಂಸೆಯನ್ನು ಮಾಡಲಾರದೆ ಮೌನವಾಗಿದ್ದಾರೆ. ಅಷ್ಟುಮಾತ್ರಕ್ಕೆ ಅವರನ್ನು

ಹಿಂಸಾವಾದಿಗಳು ಅಲ್ಲವೆಂದು ಹೇಳಲಾರೆವು. ಇಲ್ಲಿ ಯಾರಲ್ಲಿ ಎಷ್ಟು ಪರಮತ ದ್ವೇಷವಿದೆ? ಎಂಬ ಪ್ರಶ್ನೆಗೆ ಎಲ್ಲರಲ್ಲಿ ಸಮಾನವಾಗಿ ಇದೆ, ಯಾರಲ್ಲಾಗಲಿ ಇತರರಿಗಿಂತಲೂ ಕಡಿಮೆಯಿಲ್ಲವೆಂದು ಹೇಳುತ್ತಿದ್ದೇವೆ. ಎಲ್ಲರಲ್ಲಿಯೂ ನೂರಕ್ಕೆ ನೂರರಷ್ಟು ಅಸೂಯೆ ಇದೆಯೆಂದೇ ಹೇಳುತ್ತಿದ್ದೇವೆ.

**ಪ್ರಶ್ನೆ :– ಆದರೇ ನಿಮ್ಮ ಮಾತಿನ ಪ್ರಕಾರವೇ ಅಂದುಕೊಂಡರೇ ನೀವು ಎಷ್ಟೋ ಮತ ಸಾಮರಸ್ಯ ಇರುವವರಾಗಿ, ಎಲ್ಲರಿಗೂ ಒಬ್ಬನೇ ದೇವರು, ಒಂದೇ ಬೋಧನೆ, ಒಂದೇ ಜ್ಞಾನ ಎನ್ನುತ್ತೀರಲ್ಲವೇ! ನೀವು ಏನು ಹೇಳಿದರೂ ನೀವು ಸಹ ಒಂದು ಮತದಲ್ಲಿ ಹುಟ್ಟಿದವರೇ! ನೀವು ಹಿಂದೂವಾಗಿಯೇ ಹೇಳಿಕೊಳ್ಳುತ್ತಿದ್ದೀರ. ಎಲ್ಲರಲ್ಲಿ ಪರಮತ ದ್ವೇಷವಿದೆಯೆಂದು ಹೇಳಿದಂತೆ ನಿಮ್ಮಲ್ಲಿ ಸಹ ಪರಮತ ದ್ವೇಷವಿರಬೇಕು ಅಲ್ಲವೇ! ನೀವು ಬುದ್ಧಿವಂತರಾಗಿ ಪ್ರವರ್ತಿಸಿ ಹೊರಗೆ ಅಸೂಯೆ ಇರುವಂತೆ ಕಾಣಿಸದಂತಿದ್ದೂ, ನಿನ್ನೆವರೆಗು ನೀನು ಇತರರನ್ನು ಪರೋಕ್ಷವಾಗಿಯಾದರೂ ಹಿಂಸಿಸಬಹುದು ಅಲ್ಲವೇ! ಇದಕ್ಕೆ ನೀವೇನು ಹೇಳುತ್ತೀರ? ನಿಮಗೆ ಮತದ್ವೇಷವಿಲ್ಲ ಎನ್ನುತ್ತೀರಾ?**

**ಉತ್ತರ :–** ಪ್ರತಿ ಮತದಲ್ಲಿಯೂ, ಪ್ರತಿ ವ್ಯಕ್ತಿಯಲ್ಲಿಯೂ ಪರಮತದ ಮೇಲೆ ಅಸೂಯೆ ಇದೆಯೆಂದು ನಾವು ಹೇಳುವ ಮಾತು ವಾಸ್ತವವೇ. ನಾನು ಆ ಮಾತನ್ನು ಶಾಸ್ತ್ರಾಧಾರದಿಂದಲೇ ಹೇಳಿದ್ದೇನೆ. ಅಂಧಕಾರದಿಂದ ಹೇಳಲಿಲ್ಲ.

**ಪ್ರಶ್ನೆ :– ಯಾವ ಶಾಸ್ತ್ರಾಧಾರದಿಂದ ಹೇಳಿದ್ದೀರ? ಯಾವ ಶಾಸ್ತ್ರದಲ್ಲಿ ಮತದ್ವೇಷಗಳ ಕುರಿತು ಬರೆದಿದ್ದಾರೋ ಹೇಳಿರಿ?**

**ಉತ್ತರ :–** ಕೇಳಿದರೇ ಯಾವುದನ್ನಾದರೂ ಹೇಳಬಲ್ಲೆವು. ನಾನು ಬ್ರಹ್ಮವಿದ್ಯಾ ಶಾಸ್ತ್ರವನ್ನು ಅನುಸರಿಸಿ ಎಲ್ಲ ಮತಗಳಲ್ಲಿ ಎಲ್ಲರಲ್ಲಿ ಅಸೂಯೆ ಇದೆಯೆಂದು ಹೇಳಿದ್ದೇವೆ. ಬ್ರಹ್ಮವಿದ್ಯಾಶಾಸ್ತ್ರವು ಮನುಷ್ಯ ಜೀವನವನ್ನು, ಜೀವನ ಸಾರಾಂಶವನ್ನು ತಿಳಿಸುತ್ತಿದೆ. ಒಬ್ಬ ಮನುಷ್ಯ ಯಾವ ಮತದಲ್ಲಾದರೂ ಹುಟ್ಟಿರಬಹುದು. ಅವನು ಮಾತ್ರ ಎಂದರೇ ಆ ಶರೀರದಲ್ಲಿ ನಿವಾಸಿಸುವ ಜೀವಿ ಮಾತ್ರ ತಲೆಯಲ್ಲಿರುವ

ಗುಣಚಕ್ರದಲ್ಲಿ ಗುಣಗಳ ಮಧ್ಯದಲ್ಲಿ ಇರುವನು. ಜೀವಿಯು ನಿವಾಸಿಸುವ ಗುಣಭಾಗಗಳು ಮೂರಾದರೇ, ಪ್ರತಿ ಗುಣ ಭಾಗದಲ್ಲಿಯೂ ಆರು ಒಳ್ಳೆಯ ಗುಣಗಳು, ಆರು ಕೆಟ್ಟ ಗುಣಗಳು ಇರುವುದು. ಕೆಟ್ಟಗುಣಗಳಿಂದಲೇ ಹೊರಗೆ ಎಷ್ಟೋ ಅನರ್ಥಗಳು ನಡೆಯುತ್ತಿವೆ. ಕೆಟ್ಟ ಗುಣಗಳು ಕ್ರಮವಾಗಿ ಹೀಗಿವೆ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎನ್ನುವವು ಆರು ಕೆಟ್ಟ ಗುಣಗಳಾಗಿರುವಾಗ ಅದರಲ್ಲಿ ಹೆಚ್ಚು ಬಲವಾದವು, ಹೆಚ್ಚು ಪ್ರಭಾವವಿರುವವು ಎರಡು ಇವೆ. ಅವು ಮೊದಲನೆಯದಾದ ಆಸೆ, ಕೊನೆಯದಾದ ಅಸೂಯೆ. ಈ ಎರಡು ಮನುಷ್ಯನಲ್ಲಿ ಬಲವಾಗಿವೆ. ಆಸೆ ಎಂಬ ಗುಣವು ಮನುಷ್ಯನ ಒಂದು ಸಂಪಾದನೆಯ ಕಡೆಗೇ ಹೋಗುವುದು. ಆಸೆ ಸ್ವಂತ ವಿಷಯಗಳಲ್ಲಿ ಮಾತ್ರವಿರುತ್ತದೆ. ಆದರೇ ಅಸೂಯೆ ಅಥವಾ ದ್ವೇಷವೆನ್ನುವುದು ಇತರ ವಿಷಯಗಳೆಲ್ಲದರ ಮೇಲೆ ಇರುತ್ತದೆ. ಆಸೆ ಕೆಲವು ವಿಷಯಗಳ ವರೆಗೇ ಪರಿಮಿತಿಯಾದರೆ, ಅಸೂಯೆ ಎಲ್ಲ ವಿಷಯಗಳಲ್ಲಿ ಇರುತ್ತದೆ. ತನಗೆ ಯಾವ ಸಂಬಂಧವಿಲ್ಲದ ಇತರರ ಸಲುವಾಗಿ ಸಹ ಅಸೂಯೆ ಗುಣ ಕೆಲಸ ಮಾಡುವುದು. ಮನುಷ್ಯ ಶರೀರ ನಿರ್ಮಾಣ, ಅದರಲ್ಲಿ ಗುಣಗಳು, ಗುಣಗಳಲ್ಲಿ ಜೀವಿಯ ನಿವಾಸ ಇವೆಲ್ಲವೂ ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ಸಂಬಂಧಿಸಿದ ವಿಷಯಗಳೇ. ಬ್ರಹ್ಮವಿದ್ಯಾ ಶಾಸ್ತ್ರವನ್ನು ಸಂಪೂರ್ಣವಾಗಿ ತಿಳಿದಿರುವ ವ್ಯಕ್ತಿ ಯಾರಾದರೂ ಇತರರಮೇಲಾಗಲೀ, ಇತರ ಮತಗಳ ಮೇಲಾಗಲೀ ಅಸೂಯೆ ಪಡುವುದಿಲ್ಲ. ಏಕೆಂದರೇ ಮೂರು ಮತಗ್ರಂಥಗಳು ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ಸಂಬಂಧಿಸಿರುವವೇ ಎಂದು ತಿಳಿದಾಗ, ತನ್ನ ಗ್ರಂಥದಲ್ಲಿನ ಜ್ಞಾನವೇ ಇತರ ಮತಗ್ರಂಥಗಳಲ್ಲಿ ಇದೆಯೆಂದು ತಿಳಿದಾಗ, ತನ್ನದೇವರೇ ಇತರರು ಹೇಳುವ ದೇವರೆಂದು ತಿಳಿದಾಗ, ವಿಷಯವೆಲ್ಲಾ ತನ್ನದೇ ಆಗಿರುವುದರಿಂದ ಅಲ್ಲಿ ಅಸೂಯೆ ಗುಣಕ್ಕೆ ದಾರಿಯೇ ಇರುವುದಿಲ್ಲ. ಇತರ ವಿಷಯಗಳ ಮೇಲಾಗಲೀ, ಇತರರ ಮೇಲಾಗಲೀ ಅಸೂಯೆ ಕೆಲಸಮಾಡುತ್ತದೆ ಆದರೇ, ತನ್ನ ವಿಷಯದ ಮೇಲೆ ತನ್ನ ಅಸೂಯೆ ಕೆಲಸ ಮಾಡುವುದಿಲ್ಲ. ಅತನಿಗೆ ಮೂರು ಮತಗಳು ಒಂದಾಗಿಯೇ ಕಾಣಿಸುತ್ತಿರುತ್ತವೆ. ಮೂರು ಮತಗಳಲ್ಲಿ ಬೇರೆಬೇರೆಯಾಗಿ ಹೇಳುವ ದೇವರು ಒಬ್ಬನಾಗಿಯೇ

ತಿಳಿಯುತ್ತಿರುತ್ತಾನೆ. ಮೂರು ಮತಗ್ರಂಥಗಳಲ್ಲಿನ ಜ್ಞಾನವು ಒಬ್ಬ ದೇವರ ಜ್ಞಾನವಾಗಿಯೇ ಕಾಣಿಸುತ್ತಿರುತ್ತದೆ. ಅಂಥವನಿಗೆ ಪರಮತ ದ್ವೇಷವಿರುವುದಿಲ್ಲ. ಸ್ವಮತವೇ ಪರಮತವಾಗಿ, ಪರಮತವೇ ಸ್ವಮತವಾಗಿ ಇರುವುದರಿಂದ ಪರಮತ ಅಸೂಯೆ ಎನ್ನುವುದು ಆತನಲ್ಲಿ ಇರುವುದಿಲ್ಲ.

ನಾನು ಎಲ್ಲರಹಾಗೆ ದೈವಜ್ಞಾನವನ್ನು ಶರೀರದ ಹೊರಗೆ ಹುಡುಕಲಿಲ್ಲ. ಶರೀರದಲ್ಲೇ ಬ್ರಹ್ಮವಿದ್ಯೆಯನ್ನು ಗ್ರಹಿಸಿದ್ದೇವೆ. ಶರೀರದಲ್ಲಿಯೇ ಜೀವಿಯ ನಿವಾಸವಿದೆಯೆಂದು, ದೇವರ ನಿವಾಸ ಸಹ ಇದೆಯೆಂದು ಗ್ರಹಿಸಿದ್ದೇವೆ. ಈ ಮಾರ್ಗದಲ್ಲಿ ಜ್ಞಾನ ತಿಳಿದಿರುವುದರಿಂದ, ನನಗೆ ಮತವೆನ್ನುವುದು ಎಲ್ಲೂ ಕಾಣಿಸಲಿಲ್ಲ. ದೇವರು ಹೇಳಿರುವ ಜ್ಞಾನದಲ್ಲಿ, ಮೂರು ದೈವಗ್ರಂಥಗಳಲ್ಲಿ 'ಮತ' ಎಂಬಹೆಸರು ಎಲ್ಲೂ ಇಲ್ಲ. ಮೂರು ದೈವಗ್ರಂಥಗಳಲ್ಲಿ ದೈವ ಪಥ ಕಾಣಿಸುತ್ತಿದೆ. ದೈವಪಥವು ಎಂದರೇ 'ದೈವಮಾರ್ಗ' ಎಂದು ಅರ್ಥ. ಮೂರು ಮತಗಳಲ್ಲಿನ ದೈವತ್ವವು ನನಗೆ ತಿಳಿದಿದೆ, ಆದ್ದರಿಂದ ನಾನು ಇಂದೂವಾದರೂ ನನಗೆ ಇತರ ಮತಗಳ ಮೇಲೆ ಅಸೂಯೆ ಇಲ್ಲ. ನಮ್ಮ ದೃಷ್ಠಿಯಲ್ಲಿ ಮತಗಳ ಹೆಸರುಗಳನ್ನು ಮನುಷ್ಯ ಸೃಷ್ಠಿಸಿದ್ದಾನೆ ಹೊರತು, ದೇವರು ತನ್ನ ಗ್ರಂಥಗಳಲ್ಲಿ ಎಲ್ಲೂ ಮತ ಪ್ರಸ್ತಾವನೆ ತೆಗೆದುಕೊಂಡುಬರಲಿಲ್ಲ. ನನಗೆ ಎಲ್ಲಾ ಮತಗಳು ಸಮಾನವೇ, ಎಲ್ಲ ಗ್ರಂಥಗಳು ಸಮಾನವೇ. ಆದ್ದರಿಂದ ನಾನು ಎಲ್ಲಾ ಗ್ರಂಥಗಳಲ್ಲಿನ ಜ್ಞಾನವನ್ನು ಸುಲಭವಾಗಿ ಹೇಳುತ್ತಿದ್ದೇನೆ. ಇತರರು ತನ್ನ ಮತವನ್ನು ಕುರಿತಾದ ಗ್ರಂಥದಲ್ಲಿನ ಜ್ಞಾನವನ್ನೇ ಸರಿಯಾಗಿ ತಿಳಿಯದೇ ಇದ್ದಾರೆ. ಹಾಗಿರುವಾಗ ಇತರ ಮತಗ್ರಂಥದಲ್ಲಿನ ಜ್ಞಾನ ಸ್ವಲ್ಪವಾದರೂ ತಿಳಿಯಲಾರರು. ಹಿಂದೂಗಳಿಗೆ ಭಗವದ್ಗೀತೆಯಲ್ಲಿನ ಜ್ಞಾನ ಪೂರ್ತಿಯಾಗಿ ತಿಳಿದಿದೆ ಎಂದು ಹೇಳಲಾರೆವು. ಭಗವದ್ಗೀತೆ ಗ್ರಂಥರೂಪವಾಗಿ ಬಂದು ಸುಮಾರು 5000 ವರ್ಷಗಳಾದರೂ ಅದು ಮಾನವರಿಗೆ ಸಂಪೂರ್ಣವಾಗಿ ಅರ್ಥವಾಗಲಿಲ್ಲ. ಎಷ್ಟೋ ವಿಷಯಗಳಲ್ಲಿನ ಅರ್ಥವನ್ನು ಅಪಾರ್ಥ ಮಾಡಿಕೊಂಡಿದ್ದೇವೆ. ಹಿಂದೂಗಳಿಗೆ ಇಲ್ಲಿಯವರೆಗು ತನ್ನ ದೈವಗ್ರಂಥವಾದ ಭಗವದ್ಗೀತೆಯನ್ನು ಕುರಿತಾದ ಅವಗಾಹನೆ ಸರಿಯಾಗಿ

ಇಲ್ಲದಿರುವಾಗ, ಇತರ ಮತಗ್ರಂಥಗಳನ್ನು ಕುರಿತು ಏನೂ ತಿಳಿಯಲಾರರು. ಅದರಿಂದ ಪ್ರತಿ ಮನುಷ್ಯ ಇತರ ಮತಗಳ ಮೇಲೆ, ಇತರ ದೈವಗ್ರಂಥಗಳ ಮೇಲೆ ಅಸೂಯೆ ಹೊಂದಿದ್ದಾನೆಂದು ಜ್ಞಾನವನ್ನು ಅನುಸರಿಸಿ ಹೇಳುತ್ತಿದ್ದೇವೆ. ಈದಿನ ಪರಮತ ದ್ವೇಷವು ಎಲ್ಲಿ ನೋಡಿದರೂ, ಯಾವ ಮತದಲ್ಲಿ ನೋಡಿದರೂ ಪ್ರತ್ಯಕ್ಷವಾಗಿ ಕಾಣಿಸುತ್ತಿದೆ. ಆದ್ದರಿಂದ ಮನುಷ್ಯ ಶರೀರವನ್ನು, ಶರೀರದಲ್ಲಿ ಜೀವಿಯ ಸ್ಥಾನವನ್ನು, ಜೀವಿಯ ರೂಪವನ್ನು ತಿಳಿದು, ಜೀವಿಗೆ ಗುಣಗಳೊಂದಿಗೆ ಇರುವ ಸಂಬಂಧವನ್ನು ಸಹ ತಿಳಿದು, ಒಬ್ಬನಿಗೆ ಮತ್ತೊಂದು ಮತದಮೇಲೆ ದ್ವೇಷ ಎಷ್ಟು ಇದೆಯೋ ಸುಲಭವಾಗಿ ಹೇಳುತ್ತಿದ್ದೇವೆ.

**ಪ್ರಶ್ನೆ :– ನೀವು ಮನುಷ್ಯನೇ, ಇತರರು ಮನುಷ್ಯರೇ. ನಿಮಗೆ ತಿಳಿದಿರುವ ಜ್ಞಾನ ನಿಮ್ಮಹಾಗೆ ಮನುಷ್ಯರಾದವರಿಗೆ ಯಾಕೆ ತಿಳಿಯಲಿಲ್ಲ?**

**ಉತ್ತರ :–** ತಮಗೆ ತಿಳಿಯದ ಜ್ಞಾನ ಇದೆಯೆಂದು ಯಾರೂ ಅಂದುಕೊಳ್ಳುತ್ತಿಲ್ಲ. ಅವರೆಲ್ಲರೂ ತಮಗೆ ತಿಳಿದಿರುವುದೇ ಜ್ಞಾನವೆಂದು, ಅದನ್ನು ಮೀರಿದ ಜ್ಞಾನವಿಲ್ಲವೆಂದು ಅಂದುಕೊಳ್ಳುವುದರಿಂದ, ಅವರು ಜ್ಞಾನ ವಿಷಯದಲ್ಲಿ ದೊಡ್ಡ ಅಡ್ಡಗೋಡೆಯನ್ನು ಕಟ್ಟಿಕೊಂಡಂತಾಗಿದೆ. ತಮಗೆ ತಿಳಿಯದ ಜ್ಞಾನದ ಮೇಲೆ ಯಾವ ದೃಷ್ಟಿ ಹರಿಸದೆ ಇರುವುದರಿಂದ ಅವರಿಗೆ ತಿಳಿದಿರುವುದೇ ಜ್ಞಾನವಾಗಿದೆ. ತಿಳಿಯದಿರುವುದೆಲ್ಲಾ ಅವರ ದೃಷ್ಟಿಯಲ್ಲಿ ಅಜ್ಞಾನವಾಗಿದೆ.

**ಪ್ರಶ್ನೆ :– ನೀವು ಓದಿರುವ ಭಗವದ್ಗೀತೆಯನ್ನೇ ಓದುವವರು ಎಷ್ಟೋಜನರಿದ್ದಾರೆ. ಅವರು ಸಹ ತಮಗೆ ತಿಳಿಯದ ಜ್ಞಾನವನ್ನು ತಿಳಿದುಕೊಳ್ಳಬೇಕೆಂಬ ಉದ್ದೇಶದಿಂದಲೇ ಓದುತ್ತಿದ್ದಾರೆ ಅಲ್ಲವೇ! ಹಾಗಿರುವಾಗ ನಿಮಗೆ ತಿಳಿದಿರುವ ಜ್ಞಾನ ಉಳಿದವರಿಗೆ ಏಕೆ ತಿಳಿಯಲಿಲ್ಲ?**

**ಉತ್ತರ :–** ದೇವರು ಕಾಣಿಸುವವನಲ್ಲ. ಆದ್ದರಿಂದ ದೈವಜ್ಞಾನವೆಲ್ಲವು ಸ್ಥೂಲವಾಗಲ್ಲದೆ ಸೂಕ್ಷ್ಮದಿಂದ ಕೂಡಿಕೊಂಡಿದೆ. ಈದಿನ ಸ್ಥೂಲವಾಗಿ ನೋಡುವವರೇ ಇದ್ದಾರೆ. ಸೂಕ್ಷ್ಮವಾಗಿ ಇರುವ ಜ್ಞಾನವು ಗ್ರಂಥವನ್ನು ಓದಿದರೂ

ಅವರಿಗೆ ತಿಳಿಯುತ್ತಿಲ್ಲ. ದೈವಜ್ಞಾನ ಸ್ಥೂಲವಾಗಿಯೇ ಅಲ್ಲದೆ ಸೂಕ್ಷ್ಮವಾಗಿ ಇದೆಯೆಂದು ತಿಳಿದು, ಪೂರ್ತಿ ಶ್ರದ್ಧೆಯಿಂದ ಓದುವವರಿಗೆ ದೇವರ ಜ್ಞಾನ ಅರ್ಥವಾಗಬಲ್ಲದು.

**ಪ್ರಶ್ನೆ :– ಭಗವದ್ಗೀತೆಯನ್ನು ಎಷ್ಟೋಜನರು ಓದಿದ ಸ್ವಾಮೀಜಿಗಳು, ಪಂಡಿತರು, ಜ್ಞಾನಿಗಳೆಂದು ಹೆಸರುವಾಸಿಯಾದವರು ಇದ್ದಾರೆ. ಅದರಲ್ಲಿ ಪ್ರತಿ ಶ್ಲೋಕಕ್ಕು ಪ್ರತಿ ಪದಕ್ಕೂ ಅರ್ಥ ಬರೆದವರಿದ್ದಾರೆ. ಅಕ್ಷರಕ್ಕೆ ವಿವರ ಹೇಳಿರುವವರು ಇದ್ದಾರೆ. ಅವರಿಗೆ ಸೂಕ್ಷ್ಮ ಜ್ಞಾನ ಅರ್ಥವಾಗಲಿಲ್ಲ ಎನ್ನುತ್ತೀರಾ? ನಿಮಗೆ ತಿಳಿದಿರುವುದು ಅವರಿಗೆ ತಿಳಿದಿಲ್ಲ ಎನ್ನುತ್ತೀರಾ?**

**ಉತ್ತರ :–** ಪ್ರಪಂಚ ವಿಷಯದಲ್ಲಿ ಎಷ್ಟಾದರೂ ತಿಳಿದವರಿರಬಹುದು ಆದರೇ, ಪರಮಾತ್ಮ ವಿಷಯದಲ್ಲಿ ತಿಳಿದವರು ಅಪರೂಪವಾಗಿಯೇ ಇದ್ದಾರೆಂದು ಹೇಳುತ್ತಿದ್ದೇವೆ. ಭಗವದ್ಗೀತೆಯನ್ನು ಎಷ್ಟೋಜನ ಹಿರಿಯರು, ಸ್ವಾಮೀಜಿಗಳು ಓದಿರಬಹುದು. ಸಂಸ್ಕೃತದಲ್ಲಿ ಪಂಡಿತರಾಗಿ ಇರುವವರು ಪ್ರತಿ ಪದಕ್ಕು, ಪ್ರತಿ ಅಕ್ಷರಕ್ಕು ವಿವರ ಬರೆದಿರಬಹುದು. ಅವೆಲ್ಲಾ ಸರಿಯಾದ ಭಾವನೆಗಳೇ ಆದರೇ ಈದಿನ ಪ್ರಜೆಗಳಲ್ಲಿ ಅಜ್ಞಾನವೇಕೆ ಇದೆ? ಪರಮತದ್ವೇಷ ಏಕೆ ಇದೆ? ಉಳಿದ ಮತಗ್ರಂಥಗಳನ್ನು ದೈವಗ್ರಂಥಗಳಾಗಿ ತಿಳಿಯದೆ ದ್ವೇಷದಿಂದ ಏಕೆ ನೋಡುತ್ತಿದ್ದಾರೆ? ಶರೀರಾಂತರ್ಗತ ಜ್ಞಾನವು ತಿಳಿಯದೆ ಹೊರಗೆ ದೇವರನ್ನು ಯಾಕೆ ಹುಡುಕುತ್ತಿದ್ದಾರೆ? ಮನುಷ್ಯರಾಗದ್ವೇಷಗಳಲ್ಲಿ ಏಕೆ ಸಿಲುಕಿಕೊಂಡಿದ್ದಾನೆ? ಈ ವಿಧವಾದ ಪ್ರಶ್ನೆಗಳೆಲ್ಲವುಗಳಿಗೂ ಮನುಷ್ಯನಿಗೆ ದೇವರ ಜ್ಞಾನ ಅರ್ಥವಾಗಲಿಲ್ಲವೆನ್ನುವುದೇ! ಸರಿಯಾದ ಉತ್ತರ. ಹಿಂದೂಗಳಿಗೆ ತಾವು ಮೊದಲು ಇಂದೂಗಳೆಂಬ ವಿಷಯವೇ ತಿಳಿಯದೇ ಹೋಗಿದೆ. ಹಾಗೆಯೇ ಭಗವದ್ಗೀತೆ ಇಂದಿನವರೆಗು ಅರ್ಥವಾಗಲಿಲ್ಲ. ಕ್ರೈಸ್ತರಿಗೆ ಬೈಬಲ್, ಮುಸ್ಲಿಮ್‌ರಿಗೆ ಖುರಾನ್ ಗ್ರಂಥದಲ್ಲಿನ ಜ್ಞಾನ ಸರಿಯಾಗಿ, ಸಂಪೂರ್ಣವಾಗಿ ತಿಳಿಯದೆಂದೇ ಹೇಳಬಹುದು. ಗ್ರಂಥದಲ್ಲಿ ಬರೆದಿರುವುದು ಒಂದಾದರೇ ಅರ್ಥವಾಗಿರುವುದು ಮತ್ತೊಂದಾಗಿದೆ. ಪ್ರತಿಯೊಂದನ್ನು ನಿಜ ಭಾವನೆಯಿಂದ ಅರ್ಥಮಾಡಿಕೊಳ್ಳಲಾರದೆ ಇದ್ದಾರೆ.

ಪ್ರಶ್ನೆ :– ಅವರು ಓದಿರುವುದು ಅದನ್ನು ನಿಜ ಭಾವನೆಯಲ್ಲಲ್ಲದೆ ಪಕ್ಕದ ಭಾವನೆಯಲ್ಲಿ ಹೇಗೆ ಅರ್ಥ ಮಾಡಿಕೊಳ್ಳುತ್ತಿದ್ದಾರೆ? ಒಂದು ವಿಷಯವನ್ನು ಓದಿದರೇ ಇರುವುದು ಇದ್ದಹಾಗೆ ತಿಳಿಯಬಲ್ಲದು. ರಾತ್ರಿ ಕತ್ತಲೆಯಾಗಿ, ಹಗಲು ಬೆಳಕಾಗಿ ಇರುತ್ತದೆಯೆಂದು ಬರೆದಿದ್ದರೇ ಅದರಲ್ಲಿ ಅರ್ಥವಾಗದಿರುವುದು ಏನೂ ಇರುವುದಿಲ್ಲ. ಹಾಗೆಯೇ ಪ್ರತಿ ಭಾಷೆಯಲ್ಲಿ ಭಾವನೆ ತಿಳಿದವರೇ ಭಾಷೆಯನ್ನು ಓದಬಲ್ಲರು, ಅರ್ಥಮಾಡಿಕೊಳ್ಳಬಲ್ಲರು? ಸಂಸ್ಕೃತ ಪಂಡಿತರು ಸಂಸ್ಕೃತದಲ್ಲಿ ಬರೆದಿರುವುದನ್ನು ಚೆನ್ನಾಗಿ ಗ್ರಹಿಸಬಲ್ಲರು. ಹಾಗೆಯೇ ಕನ್ನಡ ಪಂಡಿತರು ಕನ್ನಡ ಬರಹವನ್ನು ಚೆನ್ನಾಗಿ ಅರ್ಥಮಾಡಿಕೊಳ್ಳುತ್ತಾರೆ. ಹಾಗಿರುವಾಗ ನೀವು ಮೂರು ದೈವಗ್ರಂಥಗಳು ಮೂರು ಮತದವರಿಗೆ ಅರ್ಥವಾಗಲಿಲ್ಲವೆಂದು ಹೇಗೆ ಹೇಳುತ್ತೀರಾ?? ಎಲ್ಲಾದರೂ ಒಂದು ಪದಕ್ಕೆ ಎರಡು ಮೂರು ಅರ್ಥಗಳಿರುವಾಗ ಆ ಸಂದರ್ಭಕ್ಕೆ ತಕ್ಕ ಅರ್ಥವನ್ನೇ ತೆಗೆದುಕೊಳ್ಳುವುದು ನಡೆಯುತ್ತಿದೆ. 'ಕರ' ಎಂದರೇ ಕೈಯಿ, ಕಪ್ಪೆ, ಕೋತಿ, ವಿಷ್ಣು ಎಂದು ನಾಲಕ್ಕು ಅರ್ಥಗಳಿವೆ. ಒಂದು ವಾಕ್ಯದಲ್ಲಿ "ಮರದ ಮೇಲೆ ಕರ ಇದೆ. ಕೆನ್ನೆಯ ಮೇಲೆ ಕರ ಇದೆ, ನೀರಿನಮೇಲೆ ಕರವಿದೆ" ಎಂದು ಇದೆಯೆಂದುಕೊಳ್ಳಿ. ಮರದಮೇಲೆ ಕರ ಎಂದಾಗ ಮರದ ಮೇಲೆ ಕೋತಿ ಇದೆಯೆಂದು ಸಂದರ್ಭ ವವನ್ನನುಸರಿಸಿ ಕರ ಎನ್ನುವುದಕ್ಕೆ ಅರ್ಥ ತೆಗೆದುಕೊಳ್ಳುತ್ತೇವೆ. ಹಾಗೆಯೇ ಕೆನ್ನೆಯ ಮೇಲೆ ಕರ ಎಂಬ ಮಾತಿನಲ್ಲಿ ಕೆನ್ನೆ ಮೇಲೆ ಕೈಯಿ ಇದೆಯೆಂದು ಹೇಳಬಹುದು. ನೀರಿನಮೇಲೆ ಕಪ್ಪೆ ಇದೆಯೆಂದು ಹೇಳುತ್ತೇವೆ ಆದರೆ, ನೀರಿನಮೇಲೆ ಕರ ಎಂದಾಗ ಕರ ಎಂಬ ಪದಕ್ಕೆ ಸಂದರ್ಭಕ್ಕೆ ತಕ್ಕಂತೆ ಕಪ್ಪೆ ಎಂದು ಅರ್ಥ ಹೇಳಬಹುದು. ನೀರಿನ ಮೇಲೆ ಕಪ್ಪೆ ಇದೆಯೆಂದು ಹೇಳಬಲ್ಲೆವು ಆದರೇ, ನೀರಿನಮೇಲೆ ಕೋತಿ ಇದೆಯೆಂದು ಹೇಳಲಾರೆವು ಅಲ್ಲವೇ! ಈ ವಿಧವಾಗಿ ಒಂದೇ ಪದಕ್ಕೆ ಎರಡು ಮೂರು ಅರ್ಥಗಳಿರುವಾಗ ಸಹ, ಆ ಪದಕ್ಕೆ ಸಂದರ್ಭಾನುಸಾರವಾಗಿ ಹೇಳುವವರು ಇರುವಾಗ, ನೀವು ಒಂದು ಗ್ರಂಥದಲ್ಲಿನ ಜ್ಞಾನ ವಿಷಯವೇ ತಿಳಿಯದೆನ್ನುವುದು ವಿಚಿತ್ರವಾಗಿದೆ. ನಿಮ್ಮ ಮಾತುಗಳನ್ನನುಸರಿಸಿ ನೀವು ಹಿಂದೂಗಳಾಗಿದ್ದು ಹಿಂದೂ ಗಳನ್ನು ಸಹ ಅಸೂಯೆಯಾಗಿ ನೋಡುತ್ತಾ, ಹಿಂದೂಗಳಿಗೆ ಭಗವದ್ಗೀತೆ ಅರ್ಥವಾಗಲಿಲ್ಲವೆಂದು ಹೇಳುತ್ತಿದ್ದೀರೆಂದು ನಾವು ಹೇಳಬಲ್ಲೆವು. ಇದಕ್ಕೆ ನೀವೇನು ಹೇಳುತ್ತೀರ?

**ಉತ್ತರ :–** ನಾನು ನಿಮಗೆ ಅರ್ಥವಾಗಲಿಲ್ಲವೆಂದು ನನಗೆ ಚೆನ್ನಾಗಿ ತಿಳಿಯುತ್ತಿದೆ. ಎದುರುಗಡೆ ಮಾತನಾಡುವ ಮನುಷ್ಯನಲ್ಲಿನ ಭಾವನೆಯನ್ನು ಅರ್ಥ ಮಾಡಿಕೊಳ್ಳಲಾರದ ನಾವು, ಮಾತುಗಳಿಲ್ಲದೇ ಬರಹಗಳು ಮಾತ್ರವಿರುವ ಗ್ರಂಥದಲ್ಲಿನ ಭಾವನೆ ಅರ್ಥವಾಗಿದೆ ಎಂದರೇ ನಂಬಬೇಕೆನ್ನುತ್ತೀರಾ? ದೇವರ ಜ್ಞಾನ ಮನುಷ್ಯನ ಭಾವನೆಗೆ ಅತೀತವಾದುದು. ಆದ್ದರಿಂದ ಭಗವದ್ಗೀತೆಯಲ್ಲಿ ಅಕ್ಷರ ಪರಬ್ರಹ್ಮ ಯೋಗದಲ್ಲಿ 20ನೇ ಶ್ಲೋಕದಲ್ಲಿ **'ಭಾವೋನ್ಯೋ'** ಎಂಬ ಪದವನ್ನು ಉಪಯೋಗಿಸಿದ್ದಾರೆ. **'ನಿನಗೆ ತಿಳಿದಿರುವ ಭಾವನೆಗಿಂತಲೂ ಅನ್ಯ ಭಾವನೆ'** ಎಂದು ಅಲ್ಲಿನ ಅರ್ಥ. ದೇವರ ಅನುಮತಿ, ಕೃಪೆ ಲಭ್ಯವಾದರೇ ದೇವರ ಜ್ಞಾನ ಸುಲಭವಾಗಿ ಅರ್ಥವಾಗುವುದು. ದೇವರ ಕೃಪೆ ಇಲ್ಲದೆ ಎಷ್ಟು ದೊಡ್ಡ ಪಂಡಿತನಿಗಾದರೂ ದೇವರ ಜ್ಞಾನ ಅರ್ಥವಾಗುವುದಿಲ್ಲವೆಂದೇ ಹೇಳಬಹುದು. **"ದೇವರ ಜ್ಞಾನವೊಂದರ ಸೂಕ್ಷ್ಮ ಭಾವನೆಗಳು ದೇವರಿಗೆ ಹೊರತು ಯಾವ ಮನುಷ್ಯನಿಗೂ ತಿಳಿದಿಲ್ಲ"** ಎಂದು ಕೊನೆಯ ದೈವ ಗ್ರಂಥದಲ್ಲಿ ಮೂರನೆಯ ಸೂರಾದಲ್ಲಿ ಏಳನೆಯ ಆಯತ್‌ನಲ್ಲಿ ಹೇಳಲ್ಪಟ್ಟಿದೆ. ಆದ್ದರಿಂದ ದೇವರ ಜ್ಞಾನಕ್ಕೆ ಸರಿಯಾದ ಭಾವನೆ ದೇವರು ತಿಳಿಸಿದರೇನೆ ನಮಗೆ ತಿಳಿಯುತ್ತದೆ. ಪ್ರಪಂಚ ವಿಷಯಗಳನ್ನೇ ಸರಿಯಾಗಿ ತಿಳಿಯಲಾರದ ಮನುಷ್ಯರು ದೈವಜ್ಞಾನವನ್ನು ಸರಿಯಾದ ಭಾವನೆಯಲ್ಲಿ ತಿಳಿಯಲಾರರೆಂದೇ ಹೇಳಬಹುದು. ಪ್ರತಿ ಪದಕ್ಕು, ಪ್ರತಿ ಅಕ್ಷರಕ್ಕು ಅರ್ಥ ತಿಳಿದವರು ಕೇವಲ ಭಾಷಾ ಪಂಡಿತರೇ ಹೊರತು, ಭಾವಪಂಡಿತರಲ್ಲ. "ಅರ್ಥ" ಎಂಬ ಪದಕ್ಕೆ ಅರ್ಥ, ಧನ ಅಥವಾ ವಿವರ ಎಂಬ ಎರಡು ಭಾವನೆಗಳಿರುತ್ತವೆ. ಧನದಲ್ಲಿ ಪ್ರಪಂಚ ಧನವಾದರೂ ಆಗಬಹುದು, ಜ್ಞಾನ ಧನವಾದರೂ ಆಗಬಹುದು. ಆದರೇ "ಅರ್ಥ" ಎಂಬ ಪದಕ್ಕೆ ಪ್ರಪಂಚ ಧನವೆಂದೇ ಎಲ್ಲರೂ ಹೇಳಬಲ್ಲರು ಆದರೇ, ಜ್ಞಾನಧನವೆಂದು ಯಾರೂ ಹೇಳಲಾರರು. ಅರ್ಥವೆಂದರೇ ವಿವರ ಅಥವಾ ಭಾವನೆ ಎಂದು ಹೇಳಬಹುದು. ಆದರೇ ಎಲ್ಲ ಪ್ರಪಂಚ ವಿಷಯಗಳ ವಿವರಗಳಲ್ಲಿಯೇ ಈ ಪದವನ್ನು ಬಳಸುವೆವು ಆದರೇ, ದೇವರ ವಿಷಯದಲ್ಲಿನ ವಿವರ ಅಥವಾ ಭಾವನೆ ಎಂಬ ಉದ್ದೇಶದಿಂದ ಯಾರೂ ಬಳಸಲಿಲ್ಲ. ಪ್ರಪಂಚ ವಿಷಯಗಳಲ್ಲಿ

ಸಹ ಎಲ್ಲಿ ಯಾವ ಪದವನ್ನು ಬಳಸಬೇಕೋ ತಿಳಿದಿಲ್ಲ ಪಂಡಿತರಿದ್ದಾರೆಂದರೇ ಆಶ್ಚರ್ಯ ಪಡಬೇಕಾದ ಅವಶ್ಯವಿಲ್ಲ. ಅಂತಹ ಸ್ಥಿತಿಯಲ್ಲಿ ಪ್ರಪಂಚ ಜ್ಞಾನವೇ ಎಲ್ಲರಿಗೂ ಸರಿಯಾದ ಪದ್ಧತಿಯಲ್ಲಿ ಅರ್ಥವಾಗುತ್ತಿಲ್ಲವೆಂದು ತಿಳಿಯುತ್ತಿದೆ. ನಮ್ಮ ಮಾತು ಸತ್ಯವೆನ್ನುವುದಕ್ಕೆ ಒಂದು ಉದಾಹರಣೆಯನ್ನು ಗಮನಿಸೋಣ.

ಒಂದು ಊರಿನಲ್ಲಿ ನ್ಯಾಯ ಸಂಬಂಧವಾದ ಯಾವ ಸಮಸ್ಯೆ ಬಂದರೂ ಆ ಊರಿನ ಪ್ರಜೆಗಳು ತಮ್ಮ ಊರ ಹಿರಿಯರ ಬಳಿಯೇ ತಮ್ಮ ಸಮಸ್ಯೆಗೆ ನ್ಯಾಯವಾದ ತೀರ್ಪು ಪಡೆಯುತ್ತಿದ್ದರು. ಆ ಊರಿನ ಪ್ರಜೆಗಳು ಯಾವ ಕೋರ್ಟಿಗು ತಮ್ಮ ಸಮಸ್ಯೆ ಪರಿಷ್ಕಾರಕ್ಕಾಗಿ ಹೋಗುತ್ತಿರಲಿಲ್ಲ. ಹಾಗೆ ಹೋದರೂ ನ್ಯಾಯವಾದ ತೀರ್ಪು ಬರುತ್ತದೆಯೆಂಬ ನಂಬಿಕೆ ಅವರಿಗಿಲ್ಲ. ಒಂದುವೇಳೆ ನ್ಯಾಯವಾದ ತೀರ್ಪು ಬಂದರೂ, ಅದು ಕೆಲವು ವರ್ಷಗಳಾದರೂ ಬರುವುದಿಲ್ಲವೆಂದು ಅವರಿಗೆ ತಿಳಿದಿತ್ತು. ಕಷ್ಟಪಟ್ಟು ಬದುಕುವ ಆ ಊರಿನ ಪ್ರಜೆಗಳು ಪಟ್ಟಣದಲ್ಲಿರುವ ನ್ಯಾಯಸ್ಥಾನಕ್ಕೆ (ಕೋರ್ಟಿಗೆ) ಹೋದರೂ, ಅಲ್ಲಿ ನ್ಯಾಯವಾದಿಗಳಿಗೆ ಅವರು ಕೇಳಿದಷ್ಟು ಹಣ ಕೊಡಲಾರದ ಪರಿಸ್ಥಿತಿ ಇರುವುದರಿಂದ, ಆ ಊರಿನ ಪ್ರಜೆಗಳು ತಮ್ಮ ಹಿರಿಯರ ಕಾಲದಿಂದಲೂ ಆ ಊರಿನ ಹಿರಿಯನ ಬಳಿಯೇ ತಮ್ಮ ಸಮಸ್ಯೆಗೆ ನ್ಯಾಯಸಮ್ಮತವಾದ ತೀರ್ಪನ್ನು ಪಡೆಯುತ್ತಿದ್ದರು. ನ್ಯಾಯಸಮ್ಮತವಾದ ತೀರ್ಪು ಕೊಡುವ ಗ್ರಾಮಹಿರಿಯ ಪ್ರಜೆಗಳು ತನ್ನಬಳಿಗೆ ತಂದ ಸಮಸ್ಯೆಗೆ ಒಂದು ಅಥವಾ ಎರಡು ದಿನಗಳಲ್ಲಿ ಸರಿಯಾದ ತೀರ್ಪುಕೊಡುತ್ತಿದ್ದರು. ತಮ್ಮ ಗ್ರಾಮ ಹಿರಿಯ ಕೊಟ್ಟ ತೀರ್ಪನ್ನು ಪ್ರಜೆಗಳೆಲ್ಲರೂ ಗೌರವದಿಂದ ಸ್ವೀಕರಿಸುತ್ತಿದ್ದರು. ಬಂದಿರುವ ತೀರ್ಪನ್ನು ಎಲ್ಲರೂ ಗೌರವವಾಗಿ ಜಾರಿಗೆಮಾಡಿಕೊಳ್ಳುತ್ತಿದ್ದರು. ತಮ್ಮ ಗ್ರಾಮ ಹಿರಿಯನಾದ ನ್ಯಾಯಾಧಿಪತಿಯ ತೀರ್ಪು ಎಲ್ಲರಿಗೂ ಅಂಗೀಕಾರವಾಗಿ ಇರುತ್ತಿತ್ತು. ಅಂತಹ ಉದ್ದೇಶದಲ್ಲಿರುವ 'ಪ್ರಜೆಗಳು ತಮ್ಮ ಚಿಕ್ಕ ದೊಡ್ಡ ಸಮಸ್ಯೆಗಳನ್ನು ತಮ್ಮ ಗ್ರಾಮಹಿರಿಯನ ಬಳಿ ವಿನಂತಿಸಿಕೊಳ್ಳುತ್ತಿದ್ದರು. ಆದ್ದರಿಂದ ಆ ಊರಿನಲ್ಲಿ ಪ್ರಜೆಗಳ ಮಧ್ಯ ಎಂತಹ ಘರ್ಷಣೆಗಳು ನಡೆಯುತ್ತಿರಲಿಲ್ಲ. ಆ ಊರಿನಲ್ಲಿನ

ಪದ್ಧತಿಯನ್ನು ನೋಡಿರುವ ಉಳಿದ ಸುತ್ತಮುತ್ತಲ ಗ್ರಾಮದ ಪ್ರಜೆಗಳು ಸಹ ಆ ಊರಿಗೆ ಬಂದು ತಮ್ಮ ಸಮಸ್ಯೆಗಳಿಗೆ ನ್ಯಾಯವಾದ ತೀರ್ಪು ಪಡೆಯುತ್ತಿದ್ದರು.

ಒಂದುದಿನ ಪಕ್ಕದ ಊರಿನ ಮನುಷ್ಯ ಆ ಊರಿನಲ್ಲಿನ ಬಂಧುಗಳ ಮನೆಗೆ ಬಂದನು. ಬಂದವನು ತಾನು ಚಿಕ್ಕವಯಸ್ಸಿರುವ ಕೋತಿಯನ್ನು ಮನೆಯಲ್ಲಿ ಬೆಳೆಸಿಕೊಳ್ಳುತ್ತಿದ್ದನು. ಮೂರು ವರ್ಷಗಳಿಂದ ಕೋತಿಗು ಮನುಷ್ಯನಿಗು ಒಬ್ಬರಿಗೊಬ್ಬರು ಬಿಡಲಾರದ ಬಂಧ ಏರ್ಪಟ್ಟಿದೆ. ಸ್ವಲ್ಪಹೊತ್ತು ಸಹ ಕೋತಿ ತನ್ನನ್ನು ಬೆಳೆಸಿದ ವ್ಯಕ್ತಿಯನ್ನು ಬಿಟ್ಟು ಇರುತ್ತಿರಲಿಲ್ಲ. ಕೋತಿಯನ್ನು ಸಾಕಿದ ವ್ಯಕ್ತಿ ಸಹ ಕೋತಿಯನ್ನು ಬಿಟ್ಟಿರುತ್ತಿರಲಿಲ್ಲ. ತನ್ನ ಕೋತಿಯಮೇಲೆ ಹೆಚ್ಚು ಪ್ರೇಮವನ್ನು ಬೆಳೆಸಿಕೊಂಡಿದ್ದನು. ಅಂತಹ ಸ್ಥಿತಿಯಲ್ಲಿ ಕೋತಿಯನ್ನು ತನ್ನಹಿಂದೆ ತೆಗೆದುಕೊಂಡು ಆ ಊರಿಗೆ ಬರುವುದು ನಡೆದಿದೆ. ಊರಿನ ಮಧ್ಯದೊಳಗೆ ಬಂದ ನಂತರ ತನ್ನಹಿಂದಿರುವ ಕೋತಿಯನ್ನು ನೋಡಿ ಒಂದು ನಾಯಿ ಬೊಗಳಿ ಕೋತಿಗೆ ಭಯವಿಟ್ಟಿತು. ಅಷ್ಟಕ್ಕೆ ಸುಮ್ಮನಿರದೆ ಕೋತಿಯನ್ನು ಕಚ್ಚಬೇಕೆಂಬ ಉದ್ದೇಶದಿಂದ ದೂರದಿಂದ ಓಡಿ ಕೋತಿಬಳಿಗೆ ಬಂದಿತು. ಆಗ ತನ್ನ ಕೋತಿಯನ್ನು ನಾಯಿಯಿಂದ ರಕ್ಷಿಸುವುದಕ್ಕೆ ಕೋತಿಯನ್ನು ಸಾಕಿದ ವ್ಯಕ್ತಿ ತನ್ನ ಕೈಯಲ್ಲಿನ ಕೋಲಿನಿಂದ ನಾಯಿಯನ್ನು ಒಂದುಏಟು ಹೊಡೆದನು. ಹೊಡೆದ ಒಂದು ಏಟು ನಾಯಿ ಕಾಲಿಗೆ ತಗಲಿರುವುದರಿಂದ ನಾಯಿಕಾಲು ಮುರಿದುಹೋಯಿತು. ಆಗ ಅದು ನಡೆಯಲಾರದ ಪರಿಸ್ಥಿತಿಯಲ್ಲಿ ಕುಂಟುತ್ತಾ ಅಲ್ಲಿಂದ ಹೋಯಿತು. ಅಲ್ಲಿ ನಡೆದ ವಿಷಯವೆಲ್ಲವನ್ನು ದೂರದಿಂದ ಗಮನಿಸಿದ ನಾಯಿ ಯಜಮಾನ ತನ್ನ ನಾಯಿಗೆ ಕಾಲು ಮುರಿದುಹೋಗುವುದನ್ನು ನೋಡಿ, ಬಹಳ ದುಃಖಪಟ್ಟು ಮರುದಿನ ಊರಿನ ಹಿರಿಯನ ಬಳಿಗೆ ಆ ಸಮಸ್ಯೆಯನ್ನು ತೆಗೆದುಕೊಂಡುಹೋಗಿ, ಅದಕ್ಕೆ ತಕ್ಕ ನ್ಯಾಯವನ್ನು ಕೇಳಿದನು. ಪ್ರತಿ ಚಿಕ್ಕ ದೊಡ್ಡ ಸಮಸ್ಯೆಗಳೆಲ್ಲದಕ್ಕೂ ನ್ಯಾಯ ಹೇಳುವ ಗ್ರಾಮಹಿರಿಯ, ಆ ಸಮಸ್ಯೆಯನ್ನು ಇಬ್ಬರ ಸಮಕ್ಷದಲ್ಲಿ ವಿಚಾರಿಸಿ, ಕೋತಿಯ ಯಜಮಾನನನ್ನು ಈ ವಿಧವಾಗಿ ಕೇಳಿದನು.

**ಗ್ರಾಮಹಿರಿಯ :–** ನಿನ್ನ ಹಿಂದಿರುವ ಕೋತಿ ನಿನ್ನದೇನಾ, ನೀನು ಸ್ವತಃವಾಗಿ ಸಾಕಿರುವುದೇನಾ?

**ಉತ್ತರ :–** ಹೌದು! ನನ್ನದೇ. ನಾನು ಮೂರು ವರ್ಷಗಳಿಂದ ಈ ಕೋತಿಯನ್ನು ಸಾಕುತ್ತಿದ್ದೇನೆ.

**ಗ್ರಾಮಹಿರಿಯ :–** ನಿನ್ನ ಕೋತಿಯನ್ನು ನೋಡಿ ನಾಯಿ ಬೊಗಳಿತು, ಓಡೋಡಿ ನಿನ್ನಬಳಿಗೆ ಬಂದಿದೆ. ಅದು ಅದು ನಾಯಿಗಿರುವ ಸಹಜ ಲಕ್ಷಣ. ಆದರೇ ನೀನು ನಿನ್ನಬಳಿಯಿರುವ ಕೋಲನ್ನು ತೋರಿಸಿ ನಾಯಿಯನ್ನು ಬೆದರಿಸಿದ್ದರೇ ಸರಿಹೋಗುತ್ತಿತ್ತು ಅಲ್ಲವೇ! ಅಲ್ಲಿಗೂ ನಾಯಿ ಹೋಗದೆ ಮೈಮೇಲೆ ಬಂದರೇ ಆಗ ಹೊಡೆದರೂ ತಪ್ಪಿಲ್ಲ. ಅದನ್ನು ಬೆದರಿಸಿ ದೂರ ಹೋಗುವಂತೆ ಮಾಡದೆ ಹೊಡೆಯುವುದು ತಪ್ಪೇಯಾಗುತ್ತದೆ. ನೀನು ನಾಯಿಯನ್ನು ಹೊಡೆದಿದ್ದೀಯಾ? ನೀನು ಹೊಡೆದ ಏಟಿಗೆ ನಾಯಿಕಾಲು ಮುರಿದಹಾಗೆ ಆರೋಪಣೆ ಬಂದಿದೆ. ಇದಕ್ಕೆ ನೀನೇನು ಹೇಳುತ್ತೀಯಾ?

**ಉತ್ತರ :–** ಹೌದು ನಾನು ನಾಯಿಯನ್ನು ಹೊಡೆದಿದ್ದೇನೆ. ನಾನು ಹೊಡೆದಿರುವುದರಿಂದಲೇ ಅದರ ಕಾಲು ಮುರಿದಿದೆ.

**ಗ್ರಾಮಹಿರಿಯ :–** ನಾಯಿಗೆ ಕಾಲು ಮುರಿದಿರುವುದಕ್ಕೆ ಕಾರಣ ನೀನೇ ಆದ್ದರಿಂದ, ಈ ತಪ್ಪಿಗೆ ಜವಾಬ್ದಾರಿ ನೀನೇಯಾಗುವೆ. ಆದ್ದರಿಂದ ನೀನು ನಾವು ನಿರ್ಣಯಿಸಿದಹಾಗೆ ಆಚರಿಸಬೇಕಾಗಿರುತ್ತದೆ. ಅದಕ್ಕೆ ಸಮಾಧಾನವೇನಾ!

**ಉತ್ತರ :–** ನೀವು ನಿರ್ಣಯಿಸಿದ ತೀರ್ಪಿನ ಪ್ರಕಾರ ನಾನು ನಡೆದುಕೊಳ್ಳುವುದಕ್ಕೆ ಸಮಾಧಾನವಾಗಿ ಇದ್ದೇನೆ.

**ಗ್ರಾಮ ಹಿರಿಯ :–** ಇಂದಿನಿಂದ ಈ ನಾಯಿಯನ್ನು ನೀನು ನಿನ್ನ ಮನೆಗೆ ಕರೆದುಕೊಂಡುಹೋಗಿ, ಮುರಿದುಹೋದ ಕಾಲು ಪುನಃ ಗುಣಮುಖವಾಗಿ ನಾಯಿ ಸರಿಯಾಗಿ ನಡೆಯುವವರೆಗು ಅದನ್ನು ನೋಡಿಕೊಳ್ಳುವ ಜವಾಬ್ದಾರಿ

ನಿನ್ನದೇ, ನಾಯಿ ಕಾಲು ಸರಿಹೋದ ನಂತರ ನಾಯಿಯನ್ನು ಅದರ ಯಜಮಾನನಿಗೆ ಹಿಂದಿರುಗಿಸಬೇಕು.

**ಉತ್ತರ :–** ನೀವು ಹೇಳಿದಹಾಗೆ ಈದಿನದಿಂದ ನಾಯಿಕಾಲಿನ ಜವಾಬ್ದಾರಿ ನನ್ನದೇ. ಕಾಲು ಸರಿಹೋದ ನಂತರ ನೀವು ಹೇಳಿದಂತೆ ನಾಯಿಯನ್ನು ಅದರ ಯಜಮಾನನಿಗೆ ಒಪ್ಪಿಸುತ್ತೇನೆ.

ಈ ವಿಧವಾಗಿ ನಾಯಿಯುನ್ನು ಹೊಡೆದ ಅಪರಾಧಕ್ಕೆ ಆ ಗ್ರಾಮಹಿರಿಯನು ತೀರ್ಪು ಕೊಡುವುದು ನಡೆದಿದೆ. ಆ ತಿರ್ಪನ್ನು ನೋಡಿ ತಮ್ಮ ಗ್ರಾಮದ ಹಿರಿಯ ಒಳ್ಳೆಯ ತೀರ್ಪನ್ನು ಕೊಟ್ಟಿದ್ದಾನೆಂದು ಆ ಊರಿನ ಪ್ರಜೆಗಳೆಲ್ಲರು ಗ್ರಾಮ ಹಿರಿಯನನ್ನು ಹೊಗಳಿದರು. ತಮ್ಮ ಗ್ರಾಮಹಿರಿಯ ಖಚಿತವಾದ ನ್ಯಾಯನಿರ್ಣೇತನೆಂದು ದೊಡ್ಡದಾಗಿ ಹೇಳಿಕೊಳ್ಳುತ್ತಿದ್ದರು. ನಾಯಿಕಾಲು ಮುರಿದ ಸಂಘಟನೆ ನಡೆದ ಎರಡು ತಿಂಗಳಿಗೆ ಅದೇ ಊರಿನಲ್ಲಿ ಮತ್ತೊಂದು ಸಂಘಟನೆ ನಡೆದು, ಆ ವಿಷಯವು ಸಹ ಗ್ರಾಮಹಿರಿಯನ ಬಳಿಗೆ ಬಂದಿದೆ. ಆ ಸಮಸ್ಯೆ ಏನೆಂದರೇ! ಒಂದು ಮೂರು ತಿಂಗಳ ಗರ್ಭಿಣಿ ಸ್ತ್ರೀ ತಲೆನೋವಿನಿಂದ ಆ ಊರಿನಲ್ಲೇ ಇರುವ ಡಾಕ್ಟರ್ ಹತ್ತಿರಕ್ಕೆ ಹೋದರೇ, ಡಾಕ್ಟರ್ ತಲೆನೋವಿಗೆ ಔಷಧಿಕೊಟ್ಟು ಕಳುಹಿಸಿದನು. ಆ ಔಷಧಿ ಆಕೆ ತಿಂದ ಕೂಡಲೇ ಆಕೆಗೆ ಗರ್ಭಸ್ರಾವ ಆಗಿದೆ. ಡಾಕ್ಟರವರು ಕೊಟ್ಟ ಔಷಧಿಯಿಂದಲೇ ಗರ್ಭಸ್ರಾವ ಆಗಿದೆಯೆಂದು ಆಕೆ ಡಾಕ್ಟರ್ ಹತ್ತಿರಕ್ಕೆ ಹೋಗಿ ಜಗಳಮಾಡಿದಳು. ಆಗ ಡಾಕ್ಟರ್ "ನಾನು ಕೊಟ್ಟ ಔಷಧಿ ತಲೆನೋವಿಗೆ ಮಾತ್ರವೇ, ನನ್ನ ಔಷಧಿಯಿಂದ ನಿನ್ನ ಗರ್ಭವು ಹೋಗಲಿಲ್ಲ" ಎಂದು ಸಮಾಧಾನಪಡಿಸಿ ಕಳುಹಿಸಿದನು. ಆದರೂ ಆ ವಿಷಯವು ಡಾಕ್ಟರ್ ರೋಗಿಯ ಮಧ್ಯದಲ್ಲಿ ದೊಡ್ಡ ಜಗಳವಾಯಿತು. ಆಗ ಆ ವಿಷಯವನ್ನು ಇಬ್ಬರು ಗ್ರಾಮಹಿರಿಯನ ಬಳಿಗೆ ತೆಗೆದುಕೊಂಡು ಹೋಗುವುದು ನಡೆಯಿತು. ಆಗ ಗ್ರಾಮಹಿರಿಯ ಕೆಳಗಿನ ವಿಧವಾಗಿ ವಿಚಾರಣೆ ನಡೆಸಲಾಯಿತು.

**ಡಾಕ್ಟರ್ :–** ಅಯ್ಯಾ! ನೀವು ನನಗೆ ತಕ್ಕ ನ್ಯಾಯವನ್ನು ಮಾಡಿರೆಂದು ಕೋರುತ್ತಿದ್ದೇನೆ.

**ಗ್ರಾಮಹಿರಿಯ :–** ನಿಮ್ಮ ಸಮಸ್ಯೆ ಏನೋ ಸವಿವರವಾಗಿ ಹೇಳಿರಿ.

**ಆಕೆ :–** ಅಯ್ಯಾ! ನಾನು ಮೂರು ತಿಂಗಳ ಗರ್ಭಿಣಿಯಾಗಿದ್ದೆ ನನಗೆ ತಲೆನೋವು ಇದ್ದಿದ್ದರಿಂದ, ತಲೆನೋವು ನಿವಾರಣೆಗಾಗಿ ಡಾಕ್ಟರವರ ಬಳಿಹೋಗಿ ನನ್ನ ತಲೆನೋವನ್ನು ಕುರಿತು ಹೇಳಿದೆನು. ಆಗ ಡಾಕ್ಟರವರು ಔಷಧಿಕೊಟ್ಟ ಬಳಿಸಿ ಎಂದು ಹೇಳಿದರು. ಔಷಧಿ ಬಳಸಿದರೆ ತಲೆನೋವು ಹೋಗುತ್ತದೆ ಎಂದು ಹೇಳಿದನು. ಹಾಗೆಯೇ ಬಳಸಿದೆನು. ಆದರೂ ತಲೆನೋವು ಹೋಗಲಿಲ್ಲ ಆದರೇ, ನನಗಿದ್ದ ಮೂರು ತಿಂಗಳ ಗರ್ಭವು ಹೋಯಿತು. ಆ ವಿಷಯವಾಗಿ ನಮ್ಮ ಮಧ್ಯ ಜಗಳ ಪ್ರಾರಂಭವಾಗಿದೆ. ಇದಕ್ಕೆ ನೀವೇ ನ್ಯಾಯ ಹೇಳಬಲ್ಲಿರೆಂದು ಆಶಿಸುತ್ತಿದ್ದೇನೆ.

**ಗ್ರಾಮಹಿರಿಯ** :– ನೀನು ಡಾಕ್ಟರ್ ಹತ್ತಿರಕ್ಕೆ ಹೋದಾಗ, ನಿನ್ನ ತಲೆನೋವನ್ನು ಕುರಿತು ಹೇಳಿದಾಗ, ನೀನು ಗರ್ಭವತಿಯೆಂಬ ವಿಷಯ ಡಾಕ್ಟರವರಿಗೆ ಹೇಳಿದ್ದೀಯಾ?

**ಆಕೆ :–** ಹೇಳಿದ್ದೇನೆ. ಮೊದಲು ನನಗೆ ಮೂರು ತಿಂಗಳ ಗರ್ಭವಿದೆಯೆಂದು ಹೇಳಿದ ನಂತರವೇ ತಲೆನೋವನ್ನು ಕುರಿತು ಹೇಳಿದ್ದೇನೆ. ಪೆಯಿನ್ಕಿಲ್ಲರ್ ಮಾತ್ರೆಗಳಾದ ಪಾರಾಸಿಟಮಾಲ್ ನಂಥವು ಕೊಟ್ಟಿದ್ದೀಯಾ?ಎರಡು ವಿಧಗಳ ಔಷಧಿಗಳು ತಲೆನೋವು ನಿವಾರಣೆಯ ಔಷಧಿಗಳೇ ಆದರೇ ಅವುಗಳಲ್ಲಿ ಯಾವುದು ಕೊಟ್ಟಿದ್ದೀಯಾ?

**ಗ್ರಾಮ ಹಿರಿಯ :–** ಎನಯ್ಯ! ಡಾಕ್ಟರವರು, ಆಕೆ ಹೇಳಿದ ಮಾತು ವಾಸ್ತವವೇನ?

**ಡಾಕ್ಟರು :–** ಆಕೆ ಹೇಳಿದ ಮಾತು ನಿಜವೇ. ಆದರೂ ನಾನು ಕೊಟ್ಟಿರುವ ಔಷಧಿ ತಲೆನೋವಿಗೆ ಮಾತ್ರವೇ!

**ಗ್ರಾಮ ಹಿರಿಯ :–** ತಲೆ ನರಗಳಲ್ಲಿ ರಕ್ತ ಪ್ರಸಾರ ಚೆನ್ನಾಗಿ ನಡೆಯುವಹಾಗೆ ಮಾಡುವ ಎಸ್ಪ್ರಿನ್ ಮಾತ್ರೆಗಳು ಕೊಟ್ಟಿದ್ದೀಯಾ ಅಥವಾ ಪೆಯಿನ್‌ಕಿಲ್ಲರ್ ಮಾತ್ರೆಗಳಾದ ಪಾರಾಸಿಟಮಾಲ್ ನಂಥವು ಕೊದ್ದೀಯಾ? ಎರಡು ವಿಧಗಳ ಔಷಧಗಳು ತಲೆನೋವು ನಿವಾರಣೆ ಔಷಧಿಗಳೇ ಆದರೇ ಅವುಗಳಲ್ಲಿ ಯಾವುದು ಕೊಟ್ಟಿರುವೆ?

**ಡಾಕ್ಟರು :–** ತಲೆ ನಾಡಿಗಳಲ್ಲಿ ರಕ್ತಪರಣ ಸರಿಯಾಗಿ ಇಲ್ಲದೇ ತಲೆನೋವು ಬಂದಿದೆಯೆಂದ ನಿರ್ಧಾರಕ್ಕೆ ಬಂದು, ರಕ್ತಪರಣೆಯನ್ನು ಉತ್ತೇಜನೆ ಪಡಿಸುವ ಎಸ್ಪ್ರಿನ್ ಮಾತ್ರೆಗಳನ್ನು ಕೊಟ್ಟಿದ್ದೇನೆ. ಪೆಯಿನ್ ಕಿಲ್ಲರ್ ಮಾತ್ರಗಳೇ ಕೊಡಲಿಲ್ಲ.

**ಗ್ರಾಮ ಹಿರಿಯ :–** ಗರ್ಭಿಣಿ ಮನುಷ್ಯರಿಗೆ ಆ ಔಷಧಿಗಳು ಕೊಟ್ಟರೆ ರಕ್ತಪ್ರಸಾರಕ್ಕೆ ಪ್ರೇರಣೆ ನಡೆದು ಗರ್ಭಸ್ರಾವವಾಗುವುದಕ್ಕೆ ಅವಕಾಶವಿರುವುದು. ನೀನು ಕೊಟ್ಟಿರುವ ಔಷಧಿಯಿಂದ ಗರ್ಭಸ್ರಾವ ನಡೆದಿರಬಹುದಲ್ಲವೇ! ಹಾಗಲ್ಲದೆ ನೋವು ನಿವಾರಣೆಗೆ ಬೇಕಾಗಿರುವ ಪೈನ್‌ಕಿಲ್ಲರ್ ಔಷಧಿಗಳು ಕೊಟ್ಟಿದ್ದರೇ ಗರ್ಭಸ್ರಾವ ಆಗುತ್ತಿರಲಿಲ್ಲ. ಇದನ್ನು ಅನುಸರಿಸಿ ಅಶ್ರದ್ಧೆಯಾಗಿ ಔಷಧಿ ಕೊಟ್ಟಿರುವುದರಿಂದ ಒಂದು ವಿಧವಾಗಿ ನಿನ್ನದೇ ತಪ್ಪಾಗುವುದು. ಒಂದುವೇಳೆ ಆಕೆ ಗರ್ಭಸ್ರಾವಕ್ಕೆ ತಿಳಿಯದ ಬೇರೆ ಕಾರಣವಿದ್ದರೂ ಅದು ಕಾಣಿಸುವುದಿಲ್ಲ, ನಿನ್ನದು ಕಾಣಿಸುತ್ತಿದೆ. ಆದ್ದರಿಂದ ಈ ತಪ್ಪಿಗೆ ನಿನ್ನದೇ ಜವಾಬ್ದಾರಿಯೆಂದು ನಾವು ಅಂದುಕೊಳ್ಳುತ್ತಿದ್ದೇವೆ. ಆದ್ದರಿಂದ ನಮ್ಮ ತೀರ್ಪಿನಲ್ಲಿ ನೀನೇ ದೋಷಿಯಾಗಿ ನಿರ್ಣಯಿಸಲ್ಪಡುತ್ತಿದ್ದೀಯ. ನಿನ್ನ ತಪ್ಪಿಗೆ ತಕ್ಕ ಶಿಕ್ಷೆಯನ್ನು ನಾವು ಹೇಳುವುದರಲ್ಲಿ ನಿನಗೇನಾದರೂ ಅಭ್ಯಂತರ ಇದ್ದರೇ ತಿಳಿಸಬೇಕಾಗಿ ಹೇಳುತ್ತಿದ್ದೇವೆ.

**ಡಾಕ್ಟರ್ :–** ನಿಮ್ಮ ತೀರ್ಪು ಯಾವುದಾದರೂ ನ್ಯಾಯಸಮ್ಮತವಾಗಿ ಇರುತ್ತದೆ. ಆದ್ದರಿಂದ ನಿಮ್ಮ ತೀರ್ಪು ನಮಗೆ ಅಂಗೀಕಾರವೇಯೆಂದು ತಿಳಿಸುತ್ತಿದ್ದೇವೆ.

**ಗ್ರಾಮಹಿರಿಯ :–** ಗತಕಾಲದಲ್ಲಿ ಇಂತಹ ಸಮಸ್ಯೆಗಳಿಗೆ ತೀರ್ಪು ತೀರಿಸಿದ ಅನುಭವದಿಂದ ಈಗಲೂ ಸಹ ಈ ತೀರ್ಪನ್ನು ಹೇಳುತ್ತಿದ್ದೇನೆ. ಗರ್ಭಸ್ರಾವಕ್ಕೆ

ಗುರಿಯಾದ ಸ್ತ್ರೀಯನ್ನು, ಆಕೆ ಗರ್ಭಸ್ರಾವಕ್ಕೆ ಕಾರಣವಾದ ಡಾಕ್ಟರವರು ಈ ದಿನದಿಂದ ತನ್ನ ಮನೆಯಲ್ಲೇ ಇಟ್ಟುಕೊಂಡು, ಆಕೆಗೆ ಬೇಕಾಗಿರುವ ಸದುಪಾಯಗಳೆಲ್ಲವನ್ನು ಸಿದ್ಧಮಾಡಬೇಕು. ಪುನಃ ಆಕೆ ಗರ್ಭಧರಿಸಿ ಮೂರು ತಿಂಗಳು ಕಳೆಯುವವರೆಗು ಆಕೆಯನ್ನು ಆಕೆಯ ಮನೆಗೆ ಕಳುಹಿಸಬಾರದು. ಅಲ್ಲೀವರೆಗು ಆಕೆಯಿಂದ ಬರುವ ಖರ್ಚುಗಳೆಲ್ಲವನ್ನು ಡಾಕ್ಟರವರೇ ಭರಿಸಬೇಕು.(ಆ ತೀರ್ಪನ್ನು ಕೇಳಿದ ಕೆಲವು ಪ್ರಜೆಗಳು ತೀರ್ಪು ಸರಿಯಾದುದಲ್ಲ ವೆಂದು ತಿಳಿದರು. ನಂತರ ಮರುದಿನದಿಂದ ಬಹಳಜನ ಗ್ರಾಮಪ್ರಜೆಗಳು ಗ್ರಾಮಹಿರಿಯನನ್ನು ಬಹಿರಂಗವಾಗಿ ವಿಮರ್ಶಿಸಲು ಆರಂಭ ಮಾಡಿದರು. ಕೆಲವರು ಗ್ರಾಮಹಿರಿಯ ಕೊಟ್ಟ ತೀರ್ಪು ಯಾರಿಗೂ ಅಂಗೀಕಾರವಲ್ಲವೆಂದು ಹೇಳಲು ಶುರುಮಾಡಿದರು. ಆಗ ಆ ವಿಮರ್ಶೆಗಳೆಲ್ಲವನ್ನು ಗಮನಿಸಿದ ಗ್ರಾಮಹಿರಿಯ, ಒಂದುದಿನ ಗ್ರಾಮ ಪ್ರಜೆಗಳನ್ನು ಎಲ್ಲರನ್ನು ಸಮಾವೇಶಗೊಳಿಸಿ ಕೆಳಗಿನ ವಿಧವಾಗಿ ಮಾತನಾಡಿದ್ದಾನೆ.)

**ಗ್ರಾಮಹಿರಿಯ :–** ನಾನು ಗತಕೆಲವು ವರ್ಷಗಳಿಂದ ಅನೇಕ ಸಮಸ್ಯೆಗಳಿಗೆ ನ್ಯಾಯ ತೀರ್ಪನ್ನು ಹೇಳಿದ್ದೇನೆ. ಅಂದಿನಿಂದ ಇಂದಿನವರೆಗು ನನ್ನನ್ನು, ನನ್ನ ತೀರ್ಪನ್ನು ಎಷ್ಟೋಜನ ಗೌರವಿಸುತ್ತಾ ಬಂದಿದ್ದಾರೆ. ಇಂದಿನವರೆಗು ಎಲ್ಲರೂ ನನ್ನನ್ನು ಒಳ್ಳೆಯ ನ್ಯಾಯನಿರ್ಣೇತನೆಂದು ಹೊಗಳುತ್ತಾ ಬಂದಿದ್ದಾರೆ. ಆದರೇ ಈ ಮಧ್ಯ ಕಾಲದಲ್ಲಿ ಎರಡುದಿನಗಳ ಹಿಂದೆ ನಾನು ಹೇಳಿರುವ ತೀರ್ಪನ್ನು ಬಹಳಜನ ವಿರೋಧಿಸುವುದೇ ಅಲ್ಲದೇ, ನನ್ನನ್ನು ದೂಷಿಸುತ್ತಾ ಮಾತನಾಡುವುದು ಸಹ ನಡೆದಿದೆ. ನನ್ನವರೆಗು ನಾನು ಹೇಳಿರುವ ತೀರ್ಪು ಪೂರ್ತಿ ನ್ಯಾಯಸಮ್ಮತವಾಗಿರುವುದಾಗಿ ಇದೆ. ಅಂತಹ ತೀರ್ಪು ನಿಮಗೆ ಯಾಕೆ ಅನ್ಯಾಯವಾಗಿ ಕಾಣಿಸುತ್ತಿದೆಯೋ ಹೇಳಿರಿ.

**(ಆಗ ಗ್ರಾಮ ಪ್ರಜೆಗಳಲ್ಲಿ ಒಬ್ಬರು ಚೆನ್ನಾಗಿ ಮಾತನಾಡುವ ವ್ಯಕ್ತಿ ಎದ್ದು ಹೀಗೆಂದನು.)**

**ಪ್ರಜೆಗಳು :–** ಇಲ್ಲಿಯವರೆಗು ನೀವು ಹೇಳಿರುವ ತೀರ್ಪುಗಳೆಲ್ಲವೂ ಎಲ್ಲರಿಗೂ ಅಂಗೀಕಾರವಾಗಿ ಸಕ್ರಮವಾಗಿ ಇವೆ. ಆದರೇ ಮೊನ್ನೆ ಕೊಟ್ಟ ತೀರ್ಪಿನಲ್ಲಿ

ಅನ್ಯಾಯ, ಅಕ್ರಮ ಇರುವುದರಿಂದ ನಮಗೆ ಒಪ್ಪಿಗೆಯಾಗಿಲ್ಲ. ಆದ್ದರಿಂದ ಎಲ್ಲರೂ ವಿರೋಧಿಸುತ್ತಿದ್ದೇವೆ.

**ಗ್ರಾಮಹಿರಿಯ :–** ನಾನು ಕೊಟ್ಟ ಈ ತೀರ್ಪಿನಲ್ಲಿ ನಿಮಗೆ ಏನು ಅನ್ಯಾಯ ಕಾಣಿಸಿದೆಯೋ, ಏನು ಅಕ್ರಮ ತಿಳಿದಿದೆಯೋ ಹೇಳಿರಿ.

**ಪ್ರಜೆಗಳು :–** ಡಾಕ್ಟರ್ ಔಷಧಿ ಕೊಡುವುದರಿಂದ ಒಬ್ಬ ಗರ್ಭಿಣಿಗೆ ಗರ್ಭ ಸ್ರಾವವಾದರೇ ಅದಕ್ಕೆ ತಕ್ಕ ಪರಿಹಾರ ಡಾಕ್ಟರಿಂದ ಕೊಡಿಸಿದ್ದರೇ ಸರಿಹೋಗುತ್ತಿತ್ತು. ಹಾಗಲ್ಲದೆ ಆಕೆ ಪುನಃ ಗರ್ಭಧರಿಸುವವರೆಗು ಡಾಕ್ಟರ್ ಬಳಿಯೇ ಇಟ್ಟುಕೊಳ್ಳಲು ಹೇಳಿರುವುದು ತಪ್ಪಲ್ಲವಾ!

**ಗ್ರಾಮಹಿರಿಯ :–** ಒಂದುವೇಳೆ ಡಾಕ್ಟರ್ ತಪ್ಪು ಮಾಡಿದ್ದಕ್ಕೆ ಸ್ವಲ್ಪ ಹಣವನ್ನು ಪರಿಹಾರವಾಗಿ ಸಲ್ಲಿಸೆಂದರೇ, ಅತನು ಸಲ್ಲಿಸಿದ ಹಣ ಖರ್ಚಾಗುವುದರೊಳಗೆ ಆಕೆ ಪುನಃ ಗರ್ಭವತಿ ಆಗದೆಹೋದರೇ, ನಾನು ಹೇಳಿರುವ ಪರಿಹಾರ ಕಡಿಮೆಯಾಗುವುದು. ಒಂದುವೇಳೆ ಡಾಕ್ಟರ್ ಕೊಟ್ಟ ಹಣ ಖರ್ಚಾಗಿಹೋಗುವ ಮೊದಲೇ ಆಕೆ ಗರ್ಭವತಿಯಾದರೇ, ಡಾಕ್ಟರ್‌ಗೆ ನಾನು ಹೆಚ್ಚು ಪರಿಹಾರವನ್ನು ಹೇಳಿದಂತಾಗುವುದು. ಆದ್ದರಿಂದ ಫಲಿತಾಂಶ ಕಾಲದಮೇಲೆ ಆಧಾರ ಪಟ್ಟಿರುವುದರಿಂದ, ಆಕೆ ಪುನಃ ಗರ್ಭಧರಿಸಿ ಮೂರು ತಿಂಗಳುಗಳು ಕಳೆಯುವವರೆಗು ಆಗುವ ಖರ್ಚೆಲ್ಲವೂ ಡಾಕ್ಟರವರೇ ಭರಿಸುವಂತೆ ಹೇಳಿದ್ದೇನೆ. ಇದು ಏಕೆ ಅಂಗೀಕಾರವಾಗುವುದಿಲ್ಲವೋ ಹೇಳಿರಿ.

**ಪ್ರಜೆಗಳು :–** ಹಣ ಪರಿಹಾರ ವಿಷಯದಲ್ಲಿ ನಿನ್ನನ್ನು ನಾವು ವಿರೋಧಿಸುತ್ತಿಲ್ಲ. ಆಕೆ ಗರ್ಭವತಿ ಆಗುವವರೆಗು ಡಾಕ್ಟರವರ ಹತ್ತಿರವೇ ಇಟ್ಟುಕೊಳ್ಳಲು ಹೇಳಿರುವುದು ತಪ್ಪೆಂದು ಹೇಳುತ್ತಿದ್ದೇವೆ.

**ಗ್ರಾಮಹಿರಿಯ :–** ಇದರಲ್ಲಿ ತಪ್ಪೇನಿದೆಯೋ ನೀವೇ ಹೇಳಿರಿ.

**ಪ್ರಜೆಗಳು :–** ಯಾವ ಸ್ತ್ರೀ ಯಾದರೂ ಹಿಂದೂಸಮಾಜದಲ್ಲಿ ತನ್ನಗಂಡನಿಂದಲೇ ಗರ್ಭಧರಿಸಬೇಕು. ನೀವು ಡಾಕ್ಟರವರೇ ಆಕೆಗೆ ಧರಿಸಬೇಕೆನ್ನುವುದು ತಪ್ಪಲ್ಲವೇ?

**ಗ್ರಾಮಹಿರಿಯ :–** ಡಾಕ್ಟರವರೇ ಆಕೆಗೆ ಗರ್ಭ ಬರುವಂತೆ ಮಾಡಬೇಕೆಂದು ನಾನು ಎಲ್ಲೂ ಹೇಳಲಿಲ್ಲ ಅಲ್ಲವೇ!

**ಪ್ರಜೆಗಳು :–** ಗರ್ಭ ಬರುವವರೆಗು ಡಾಕ್ಟರ್ ಹತ್ತಿರವೇ ಇಟ್ಟುಕೊಳ್ಳಲು ಹೇಳಿರುವುದರಲ್ಲಿ ಅರ್ಥ ಅದೇ ಅಲ್ಲವೆ!

**ಗ್ರಾಮಹಿರಿಯ :–** ನೀವೇ ಯಾಕೆ ಹಾಗೆ ಅಂದುಕೊಳ್ಳಬೇಕು? ನಾನು ಹೇಳದ ವಿಷಯವನ್ನು ನಿಮ್ಮ ಇಷ್ಟಬಂದಹಾಗೆ ಅಂದುಕೊಂಡರೇ ಹೇಗೆ?

**ಪ್ರಜೆಗಳು :–** ಆಕೆ ಪುನಃ ಗರ್ಭವತಿ ಆಗುವವರೆಗು ಡಾಕ್ಟರ್ ಬಳಿಯೇ ಇಟ್ಟುಕೊಳ್ಳಬೇಕೆಂದು ನೀವೇತಾನೆ ಹೇಳಿದ್ದು. ಡಾಕ್ಟರ್ ಹತ್ತಿರವಿರುವಾಗ ಡಾಕ್ಟರಿಂದಲೇ ಗರ್ಭವು ಬರಬೇಕಲ್ಲವೇ! ಗಂಡನಿಲ್ಲದೇ ಗರ್ಭ ಬರಬೇಕೆಂದರೇ ಅದೇ ಅಲ್ಲವೇ! ಅರ್ಥ.

**ಗ್ರಾಮಹಿರಿಯ :–** ಗಂಡನಿಂದಲ್ಲದೇ ಡಾಕ್ಟರವರಿಂದಲೇ ಗರ್ಭವು ಬರಬೇಕೆಂದು ನಾನು ಎಲ್ಲಾದರೂ ನನ್ನ ತೀರ್ಪಿನಲ್ಲಿ ಹೇಳಿದ್ದೀನಾ?

**ಪ್ರಜೆಗಳು :–** ಪ್ರತ್ಯೇಕವಾಗಿ ಹೇಳಲಿಲ್ಲ ಆದರೇ, ಆಕೆ ಡಾಕ್ಟರವರ ಮನೆಯಲ್ಲಿ ಇದ್ದರೇ ಆಕೆಗೆ ಗರ್ಭವು ಹೇಗೆ ಬರುತ್ತದೋ ನೀವೇ ಹೇಳಿರಿ?

**ಗ್ರಾಮಹಿರಿಯ :–** ನಾನು ನನ್ನ ತೀರ್ಪಿನಲ್ಲಿ "ಡಾಕ್ಟರವರ ಮನೆಯಲ್ಲಿಯೇ ಆಕೆಗೆ ಬೇಕಾಗಿರುವ ಸದುಪಾಯಗಳೆಲ್ಲವೂ ಒದಗಿಸಬೇಕು" ಎಂದು ಹೇಳಿದ್ದೇನೆ. ಎಲ್ಲಾ ಸದುಪಾಯಗಳೆಂದು ಹೇಳಿದಾಗಲೇ, ಆಕೆ ಗರ್ಭಧರಿಸುವುದಕ್ಕೆ ಗಂಡನನ್ನು ಸಹ ತನ್ನಜೊತೆಗೇ ಇಟ್ಟುಕೊಳ್ಳಲು ಹೇಳಿದಂತಾಗಿದೆ. ಗಂಡನೊಂದಿಗೆ ಸಹ ಎಲ್ಲಾ ಸದುಪಾಯಗಳನ್ನು ಒದಗಿಸಿ, ಗರ್ಭವನ್ನು ಧರಿಸಿದ ನಂತರ ಮೂರು ತಿಂಗಳವರೆಗು ಆಕೆಯ ಖರ್ಚು, ಆಕೆಯ ಗಂಡನ ಖರ್ಚು ಎರಡೂ ಡಾಕ್ಟರವರೇ ಭರಿಸುವಂತೆ, ಅಲ್ಲಿಯವರೆಗು ಆಕೆಯಿಂದ ಆದ ಖರ್ಚೆಲ್ಲವನ್ನು ಡಾಕ್ಟರವರೇ ಭರಿಸಬೇಕೆಂದು ಹೇಳಿದ್ದೇನೆ ಅಲ್ಲವೇ! ನಾನು ಹೇಳುವ ತೀರ್ಪಿನಲ್ಲಿ ಆಕೆಯ

ಗಂಡನಿಂದಲೇ ಗರ್ಭ ಧರಿಸುವಂತೆ ಹೇಳಿದ್ದೇನೆ ಹೊರತು, ನೀವಂದು ಕೊಂಡಹಾಗೆ ನಾನು ಹೇಳಲಿಲ್ಲ. ನಾನು ಹೇಳದ ವಿಷಯವನ್ನು ನೀವು ಅಂದುಕೊಳ್ಳುವುದರಲ್ಲಿ ನಿಮ್ಮ ತಪ್ಪೇ ಹೊರತು, ನನ್ನ ತಪ್ಪು ಏನೂ ಇಲ್ಲ. ಸತಿಸಾವಿತ್ರಿ ಸಂತಾನವನ್ನು ಕೇಳಿದಾಗ ಯಮಧರ್ಮರಾಜ ಗಂಡನನ್ನು ಸಹ ಕೊಟ್ಟಿದ್ದಾನೆ ಅಲ್ಲವೇ! ಇದನ್ನು ಹಾಗೇ ಏಕೆ ಅಂದುಕೊಳ್ಳಲಿಲ್ಲ.

ಈ ವಿಧವಾಗಿ ಬಹಳ ವಿಷಯಗಳಲ್ಲಿ ಬಹಳಜನ ತಮ್ಮ ಇಷ್ಟಬಂದಹಾಗೆ ಅಂದುಕೊಂಡು ಎದುರಿಗಿರುವವರನ್ನು ತಪ್ಪು ಮಾಡಿದವರಂತೆ ಹೇಳುತ್ತಿದ್ದಾರೆ. ಉದಾಹರಣೆಗೆ ಒಂದು ವಿಷಯವನ್ನು ಹೇಳುವೆನು ನೋಡಿರಿ. ಒಬ್ಬ ರಚಯಿತ ಭಗವದ್ಗೀತೆ ಶ್ಲೋಕಗಳಿಗೆ ವಿವರವನ್ನು ಬರೆದು ಅದಕ್ಕೆ **"ತ್ರೈತಸಿದ್ಧಾಂತ ಭಗವದ್ಗೀತೆ"** ಎಂದು ಹೆಸರು ಇಟ್ಟಿದ್ದಾನೆ. ಆತನು ತನ್ನ ಗ್ರಂಥದಲ್ಲಿ ಭಗವದ್ಗೀತೆಯಲ್ಲಿನ ಮೊದಲ ಅಧ್ಯಾಯವಾದ ಅರ್ಜುನ ವಿಷಾದಯೋಗವನ್ನು ಬಿಟ್ಟು ಎರಡನೆಯ ಅಧ್ಯಾಯವಾದ ಸಾಂಖ್ಯಯೋಗದಲ್ಲಿ 11ನೇ ಶ್ಲೋಕದಿಂದ ವಿವರವನ್ನು ಬರೆದಿದ್ದಾನೆ. ಆತನು ಬರೆದಿರುವುದು ಹಾಗಿರುವಾಗ ಉಳಿದ ಪ್ರಜೆಗಳು ಈಗ ನೀವುಹೇಗೆ ನನ್ನನ್ನು ಅಪಾರ್ಥ ಮಾಡಿಕೊಂಡಿದ್ದೀರೋ ಅದೇ ವಿಧವಾಗಿ ಆತನು "ಭಗವದ್ಗೀತೆ 18 ಅಧ್ಯಾಯಗಳಲ್ಲ 17 ಅಧ್ಯಾಯಗಳೇ" ಎಂದು ಹೇಳಿದ್ದಾನೆಂದು ಅಂದುಕೊಂಡಿದ್ದಾರೆ. ಆತನು ಭಗವದ್ಗೀತೆ 18 ಅಧ್ಯಾಯಗಳು ಇಲ್ಲವೆಂದು 17 ಅಧ್ಯಾಯಗಳೇ ಎಂದು ಎಲ್ಲಾದರೂ ಹೇಳಿದ್ದಾನಾ? ಹಾಗೆ ಎಲ್ಲೂ ಹೇಳಲಿಲ್ಲ. "ನಾನು ಇಲ್ಲಿಂದ ಬರೆಯುತ್ತಿದ್ದೇನೆ" ಎಂದು ಹೇಳಿದ್ದಾನೆ ಅಷ್ಟೇ ಹೊರತು, ಪ್ರತ್ಯೇಕಿಸಿ ಭಗವದ್ಗೀತೆ 17 ಅಧ್ಯಾಯಗಳೇ ಎಂದು ಹೇಳಲಿಲ್ಲ. "ಅರ್ಜುನನು ಹೇಳಿರುವ ಅಧ್ಯಾಯವನ್ನು ಹೇಳಲಿಲ್ಲ. ಎಂದು ಬರೆದಿದ್ದಾನೆ ಹೊರತು ಭಗವದ್ಗೀತೆ 18 ಅಧ್ಯಾಯಗಳಲ್ಲವೆಂದು ಎಲ್ಲೂ ಹೇಳಲಿಲ್ಲ. ಇನ್ನೂ ಮಧ್ಯದಲ್ಲಿ ಅಲ್ಲಲ್ಲಿ ಸುಮಾರು ನೂರು (100) ಶ್ಲೋಕಗಳಿಗೆ ಭಾವನೆ ಬರೆಯಲಿಲ್ಲ. "ಮನುಷ್ಯರಿಗೆ ಅವಶ್ಯವಾದಗಳು ಮಾತ್ರ ಬರೆಯುತ್ತಿದ್ದೇವೆ. ಅವಶ್ಯವಿಲ್ಲವುಗಳನ್ನು ಬರೆಯುತ್ತಿಲ್ಲವೆಂದು" ಸಹ ಹೇಳಿದ್ದಾನೆ. ಅಲ್ಲಿರುವ ಸತ್ಯವನ್ನು

ಗ್ರಹಿಸದೆ ಆತನು ಹೇಳದ ಮಾತನ್ನು ಹಿಂದೂಗಳು ಆರೋಪಿಸುವುದು ನಡೆದಿದೆ. ಅದೇ ರಚಯಿತ ಖುರಾನ್ ಗ್ರಂಥವನ್ನು ಬರೆದಿದ್ದಾನೆ. ಖುರಾನ್ ಆರುಸಾವಿರ ಮೂನ್ನೂರು ಆಯತ್‌ಗಳಿಗೆ ಮೇಲಾಗಿ (ವಾಕ್ಯಗಳಿಗೆ ಹೆಚ್ಚಾಗಿ) ಇರುವಾಗ ಕೇವಲ ಎರಡುನೂರು ವಾಕ್ಯಗಳಿಗೆ ಮಾತ್ರವೇ ವಿವರವನ್ನು ಬರೆದಿದ್ದಾನೆ. ಹಾಗೆ ಬರೆದಿರುವ ಗ್ರಂಥಕ್ಕೆ "ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು" ಎಂದು ಹೆಸರಿಡುವುದು ನಡೆದಿದೆ. ಅದನ್ನು ನೋಡಿದ ಮುಸ್ಲಿಮ್‌ರು ಆ ರಚಯಿತನಮೇಲೆ ಯಾವ ಆರೋಪಣೆ ಮಾಡಲಿಲ್ಲ. "ಆತನಿಗೆ ತಿಳಿದ ವಾಕ್ಯಗಳಿಗೆ ವಿವರ ಬರೆದಿದ್ದಾನೆ, ತಿಳಿಯದವುಗಳಿಗೆ ಬರೆಯಲಿಲ್ಲ" ಎಂದು ಅಂದುಕೊಂಡರು. ಮುಸ್ಲಿಮ್‌ಗಳು ಹಾಗೆ ಅಂದುಕೊಂಡರೇ, ಅವರು ಅಂದುಕೊಂಡಹಾಗೆ ಹಿಂದೂಗಳು ಆತನಿಗೆ ತಿಳಿದವು ಮಾತ್ರವೇ ಬರೆದಿದ್ದಾನೆ, ಉಳಿದವುಗಳನ್ನು ಕುರಿತು ಬರೆಯಲಿಲ್ಲವೆಂದು ಯಾಕೆ ಅಂದುಕೊಳ್ಳಬಾರದು? ಹಾಗೆ ಅಂದುಕೊಳ್ಳದೇ ಅವರ ಇಷ್ಟಬಂದಹಾಗೆ ಅಂದುಕೊಂಡು ಭಗವದ್ಗೀತೆ 18 ಅಧ್ಯಾಯಗಳಲ್ಲ 17 ಅಧ್ಯಾಯಗಳೇ ಎಂದು ಅವರೇ ಹೇಳುತ್ತಿದ್ದಾರೆ ಹೊರತು, ಆ ಮಾತನ್ನು ರಚಯಿತ ಎಲ್ಲೂ ಹೇಳಲಿಲ್ಲ ಅಲ್ಲವೇ! ಹೀಗೆ ಬಹಳಜನ ಬಹಳಕಡೆ ತಪ್ಪಾಗಿ ಮಾತನಾಡುವುದು ನಡೆಯುತ್ತಿರುತ್ತದೆ. ಅದರ ಪ್ರಕಾರವೇ ಈಗ ನೀವು ಸಹ ನಾನು ಹೇಳದ ತೀರ್ಪನ್ನು ನಾನು ಹೇಳಿದಂತೆ ಮಾತನಾಡುತ್ತಿದ್ದೀರ. ಯಾವ ವಿಷಯವನ್ನಾದರೂ ಸ್ವಲ್ಪ ಯೋಚಿಸಿ ಮಾತ ನಾಡಬೇಕೆ ಹೊರತು, ಹಾಗಲ್ಲದೆ ತಮ್ಮ ಇಷ್ಟಬಂದಹಾಗೆ ಮಾತನಾಡುತ್ತಾ ಹೋದರೇ ಅರ್ಥಗಳೆಲ್ಲವೂ ಅಪಾರ್ಥಗಳಾಗಿ ಹೋಗಬಲ್ಲವು. ಸತ್ಯವೆಲ್ಲಾ ಅಸತ್ಯದಿಂದ ಮುಚ್ಚಿಹಾಕಲ್ಪಡುವುದು. ಆಗ ಇರುವ ಸತ್ಯವು ತಿಳಿಯದೆ ಹೋಗುವುದು.

ಈಗಿನ ಪ್ರಪಂಚದಲ್ಲಿನ ಮನುಷ್ಯರಿಗೆ ಪ್ರಪಂಚ ಜ್ಞಾನವೇ ಸರಿಯಾಗಿ ಅರ್ಥವಾಗುತ್ತಿಲ್ಲ. ಪ್ರಪಂಚ ವಿಷಯಗಳಿಗಿಂತ ಎಷ್ಟೋ ದೊಡ್ಡದಾದ ಪರಮಾತ್ಮ ವಿಷಯಗಳು ಸರಿಯಾಗಿ ಅರ್ಥವಾಗುವವೆಂಬ ನಂಬಿಕೆಯಿಲ್ಲ. ಅಂತಹ

ಸ್ಥಿತಿಯಲ್ಲಿ ಅವರನ್ನು ಅನುಸರಿಸಿ ಅವರಿಗೆ ಅರ್ಥವಾಗುವ ಬೋಧನೆಗಳನ್ನು ಹೇಳುವವರನ್ನು 'ಜ್ಞಾನಿ' ಎಂದು ಹೊಗಳುತ್ತಿದ್ದಾರೆ. ಪ್ರಜೆಗಳನ್ನು ಅನುಸರಿಸದೇ ಅವರಿಗೆ ಸರಿಹೋಗದ ಎಷ್ಟು ದೊಡ್ಡ ಜ್ಞಾನವನ್ನು ಹೇಳಿದರೂ, ಅದನ್ನು ಗ್ರಹಿಸದ ಮನುಷ್ಯರು ಹೇಳಿರುವವರನ್ನು ಅಜ್ಞಾನಿಗಳೆನ್ನುವುದು ನಡೆಯುತ್ತಿದೆ. ಇದೇ ಪದ್ಧತಿ ಪ್ರಕಾರ ಒಂದೇ ವಿಷಯವನ್ನೇ ಒಂದು ಮತದಲ್ಲಿ ಒಂದು ವಿಧವಾಗಿ, ಮತ್ತೊಂದು ಮತದಲ್ಲಿ ಮತ್ತೊಂದು ವಿಧವಾಗಿ ಅರ್ಥಮಾಡಿಕೊಳ್ಳುವು ದರಿಂದ, ಒಂದೇ ವಿಷಯವೇ ಒಂದು ಮತದಲ್ಲಿ ಒಂದು ಭಾವನೆ ಇರುವಾಗ, ಮತ್ತೊಂದು ಮತದಲ್ಲಿ ಮತ್ತೊಂದು ಭಾವನೆಯೊಂದಿಗೆ ಇದೆ. ಭಗವದ್ಗೀತೆಯಲ್ಲಿನ ಶ್ಲೋಕವೊಂದರ ಭಾವನೆ ಹಿಂದೂಗಳಲ್ಲಿಯೇ ಕೆಲವರಿಗೆ ಒಂದು ವಿಧವಾಗಿ, ಇನ್ನುಕೆಲವರಿಗೆ ಮತ್ತೊಂದು ವಿಧವಾಗಿ ಅರ್ಥವಾಗುತ್ತಿದೆ. **"ಕರ್ಮಣ್ಯೇ ವಾಧಿಕಾರಸ್ತೇ"** ಎಂಬ ಶ್ಲೋಕದಲ್ಲಿ ಹಿಂದೂ ಗುರುಗಳೆಲ್ಲರಿಗೂ ಹೀಗೆ ಅರ್ಥ ವಾಗಿದೆ. **"ಕೆಲಸ ಮಾಡುವುದರಲ್ಲಿ ಅಧಿಕಾರವಿದೆ ಆದರೇ, ಫಲಿತದ ಮೇಲೆ ಅಧಿಕಾರವಿಲ್ಲ"** ಎಂದು ಹೇಳಿದ್ದಾರೆ. ಆದರೇ ಅದರ ವಾಸ್ತವ ಅರ್ಥ **"ಕೆಲಸ ಮಾಡುವುದರಲ್ಲಿ ಯಾರಿಗೂ ಅಧಿಕಾರವಿಲ್ಲ, ಫಲಿತದ ಮೇಲೆ ಅಧಿಕಾರವಿದೆಯೆಂದು ಇದೆ."** ವಾಸ್ತ ಅರ್ಥ ಕೆಲವರಿಗೆ ಮಾತ್ರವೇ ಅಪರೂಪವಾಗಿ ಅರ್ಥವಾಗಿರುವಾಗ, ಉಳಿದವರಿಗೆಲ್ಲಾ ಬೇರೆ ವಿಧವಾಗಿ ಅಸತ್ಯ ಭಾವನೆಯಿಂದ ಅರ್ಥವಾಗಿದೆ. ಆದರೇ ಆ ವಿಷಯವು ಅವರಿಗೆ ತಿಳಿಯದೆ ಇರುವುದರಿಂದ ಅವರಿಗೆ ತಿಳಿದಿರುವುದೇ ಸತ್ಯವೆಂದುಕೊಳ್ಳುವುದು ನಡೆಯುತ್ತಿದೆ. ಹೀಗೆ ಸತ್ಯಕ್ಕು ಅಸತ್ಯಕ್ಕು ಮನುಷ್ಯರಲ್ಲಿ ಭೇದಾಭಿಪ್ರಾಯಗಳು ಹುಟ್ಟಿಬರುತ್ತಿವೆ.

ಮನುಷ್ಯರಲ್ಲಿ ಬಂದಿರುವ ಅಭಿಪ್ರಾಯ ಭೇದಗಳು ಮತಗಳೊಳಗೆ ಸೇರಿಕೊಂಡು ಹೋಗಿ, ಮನುಷ್ಯರಲ್ಲಿ ಸಾಮೂಹಿಕವಾಗಿ ಒಬ್ಬರಮೇಲೆ ಮತ್ತೊಬ್ಬರಿಗೆ ದ್ವೇಷ ಹುಟ್ಟಿಸುತ್ತಿವೆ. ದ್ವೇಷ (ಅಸೂಯೆ) ದಿಂದ ಮನುಷ್ಯನಿಗೆ ಆಗ್ರಹ ಬರುತ್ತಿದೆ. "ಆಗ್ರಹ" ಎಂದರೇ! ಗ್ರಹವಿಲ್ಲದಿರುವುದು ಎಂದು ಅರ್ಥ. ಗ್ರಹವಿಲ್ಲದಿರುವುದೆಂಬ ಅರ್ಥವನ್ನು ಪೂರ್ತಿಯಾಗಿ ತೆಗೆದುಕೊಂಡರೇ ಗ್ರಾಹಿತ

ಶಕ್ತಿ ಇಲ್ಲದಿರುವುದೆಂದು ಅರ್ಥವಾಗುತ್ತದೆ. ಗ್ರಾಹಿತ ಶಕ್ತಿ ಇಲ್ಲದಿರುವಾಗ ಅಂದರೇ! ಆಗ್ರಹದಿಂದ ಮನುಷ್ಯನಿರುವಾಗ ಅದು ಮನುಷ್ಯನನ್ನು ಅಧೋಗತಿಗೆ ತೆಗೆದುಕೊಂಡು ಹೋಗುವುದು. ಅದರಿಂದಲೇ ಮನುಷ್ಯರ ಮಧ್ಯ, ಮತಗಳ ಮಧ್ಯ ಘರ್ಷಣೆಗಳು ಏರ್ಪಡುತ್ತಿವೆ. ಅದರಿಂದ ಮನುಷ್ಯರು ಉಗ್ರವಾದಿಗಳಾಗಿ ಬದಲಾಗುತ್ತಿದ್ದಾರೆ. ಮೂರು ಮತಗಳಲ್ಲಿ ಉಗ್ರವಾದವಿದೆಯೆಂದು 1980 ರಿಂದ ನಾವು ಹೇಳುತ್ತಲೇ ಇದ್ದೇವೆ. ಹಿಂದೂಮತದಲ್ಲಿ ಉಗ್ರವಾದ ಇಲ್ಲವೆಂದು ಹಿಂದೂಗಳು ಒಂದುಕಡೆ ಹೇಳುತ್ತಿದ್ದರೂ, ಅದು ಯಾರಿಗೂ ತಿಳಿಯದಂತೆ ಕಾಣಿಸದೆ ಇದೆ. ಮುಸ್ಲಿಮ್ ಮತದಲ್ಲಿ ಹೊರಗೆ ಕಾಣಿಸುತ್ತಿದೆ. ಕ್ರೈಸ್ತ ಮತದಲ್ಲಿ ಸಹ ಉಗ್ರವಾದವಿದೆ. ಇತರ ಮತಗಳನ್ನು ಹಿಂಸಿಸುವ ಸ್ವಭಾವವು ಎಲ್ಲಿದೆಯೋ ಅಲ್ಲಿ ಉಗ್ರವಾದವಿದ್ದಂತೆಯೇ! ನಮ್ಮದು **"ಶಾಂತಿ ಮತವು"** ಎಂಬ ಕ್ರೈಸ್ತರು ಮೇಲಕ್ಕೆ ಶಾಂತವಾಗಿ ಕಾಣಿಸುತ್ತಿದ್ದರೂ ಕ್ರೈಸ್ತರಲ್ಲಿ ಕೆಲವರು ಯಾರಿಗೂ ತಿಳಿದಿಲ್ಲ, ಯಾರೂ ಗುರುತು ಹಿಡಿಯದ ಉಗ್ರವಾದವನ್ನು ನಡೆಸುತ್ತಿದ್ದಾರೆ. ಉಗ್ರವಾದವನ್ನು ಮತದಲ್ಲಿ ಇರುವವರೆಲ್ಲರೂ ಮಾಡಬೇಕಾದ ಕೆಲಸವಿಲ್ಲ. ಒಂದು ಮತದಲ್ಲಿ ಕೆಲವರು ಇತರ ಮತಗಳ ಸಲುವಾಗಿ ಕ್ರೂರತ್ವ ಹೊಂದಿರುವ ಆಚರಣೆಗಳು ಮಾಡಿದಂತಾದರೇ ಕೆಟ್ಟಹೆಸರು ಪೂರ್ತಿಯಾಗಿ ಆ ಮತಕ್ಕೆ ಬರುವುದು. ಹಿಂದೂಗಳಲ್ಲಿ ನಿತ್ಯವು ವೇದಪಾರಾಯಣ ಮಾಡುವ ಸಾತ್ವಿಕರು ಎಷ್ಟು ಜನರಿದ್ದರೂ, ಇತರ ಮತಗಳ ಮೇಲೆ ದ್ವೇಷ ಉಂಟಾಗಿ, ಕ್ರೋಧ ಪ್ರಕಟಿಸಿ, ಹಿಂಸಾ ವೃತ್ತಿಯನ್ನು ಮಾಡುವವರು ಕೆಲವರಿದ್ದರೂ, ಉಗ್ರವಾದವೆಂಬ ಹೆಸರು ಪೂರ್ತಿ ಹಿಂದೂಮತಕ್ಕೆ ಬರುತ್ತಿದೆ. ಆದರೇ ಹಿಂದೂಗಳದು ಒಂದು ವಿಧವಾಗಿ ಇತರ ಮತಗಳ ಮೇಲೆ ಅಸೂಯೆಯಿಂದ ಉಗ್ರವಾದವಿದ್ದರೂ, ಅವರು ಕುರುಡು ಉಗ್ರವಾದವನ್ನು ನಡೆಸುತ್ತಿದ್ದಾರೆ. ಕಣ್ಣು ಕಾಣಿಸದ ಕುರುಡು ಹಾವು ತನ್ನ ಮರಿಗಳನ್ನು ತಾನೇ ತಿಂದಹಾಗೆ, ಹಿಂದೂಗಳು ತಮ್ಮ ಮತದವರನ್ನೇ ಪರಮತಸ್ಥರಂತೆ ಭಾವಿಸಿ, ಹಿಂದೂ ಮತದವರನ್ನೇ ಹಿಂಸಿಸುತ್ತಿದ್ದಾರೆ. ನಾವು ಈ ವಿಷಯವನ್ನು ಅನುಭವ ಪೂರ್ವಕವಾಗಿ ಹೆಳುತ್ತಿದ್ದೇವೆ. ನಾವು ಹಿಂದೂಗಳಾಗಿ ಹಿಂದೂ ಗುರುವಾಗಿರುವ ನಮ್ಮ ಮೇಲೆ ಹಿಂದೂಗಳೇ

ಎಷ್ಟೋಬಾರಿ ದಾಳಿ ಮಾಡಿದ್ದಾರೆ. ನಾವು ಹೇಳುವ ಭಗವದ್ಗೀತೆಯನ್ನು ಸಹಿತ ಪರಮತ ಬೋಧನೆಯಾಗಿ ತಿಳಿದ ಕುರುಡರು ಹಿಂದೂಗಳೇ ಇದ್ದಾರೆ. ಅವರನ್ನು ನಮ್ಮ ಮತಧರ್ಮವು ಯಾವುದೋ, ಪರಮತ ಧರ್ಮವು ಯಾವುದೋ ತಾರತಮ್ಯ ತಿಳಿಯದ ಕುರುಡರೆಂದು ಹೇಳಬಹುದು. ಹಿಂದೂ ಧರ್ಮಗಳನ್ನು ತಿಳಿಯದವರು ಹಿಂದೂಗಳಲ್ಲಿ ಇರುವುದರಿಂದ, ಸ್ವಮತ ಗುರುಗಳ ಮೇಲೆಯೇ ದಾಳಿಗೆ ಇಳಿಯುತ್ತಿದ್ದಾರೆ. ಹಿಂದೂ ಮತದಲ್ಲಿ ಇರುವ ದೊಡ್ಡಲೋಪ, ತಪ್ಪು ಇದೇಯೆಂದು ಹೇಳಬಹುದು. ಹಿಂದೂ ಧರ್ಮಗಳನ್ನು ತಿಳಿಯದವರೆಲ್ಲರೂ ನಾವು ಹಿಂದೂಗಳೆಂದು ಹೇಳಿಕೊಳ್ಳುವುದರಿಂದ, ರಾಜಕೀಯ ಬಣ್ಣ ಬಳೆದುಕೊಂಡವರು ಎಷ್ಟುಮಾತ್ರ ಜ್ಞಾನಿಗಳಲ್ಲದಿದ್ದರೂ ನಾವು ಹಿಂದೂ ರಕ್ಷಕರೆಂದು ಹೇಳಿಕೊಳ್ಳುವುದರಿಂದ, ಹಿಂದೂಮತ ಕ್ಷೀಣತೆ ಏರ್ಪಡುತ್ತಿದೆಯೆಂದು ಅರ್ಥವಾಗುತ್ತಿದೆ. ಹಿಂದೂ ಗುರುಗಳು ಹಿಂದೂ ಮತವಾದಿಗಳಿಗೆ ಭಯಪಟ್ಟು, ಆಧ್ಯಾತ್ಮಿಕ ಜ್ಞಾನವನ್ನು ಹೇಳಲಾರದೆ ಹೋಗುವುದರಿಂದ, ಹಿಂದೂ ಪ್ರಜೆಗಳು ಜ್ಞಾನ ತಿಳಿಯದಸ್ಥಿತಿಯಲ್ಲಿ ಇತರ ಮತಗಳನ್ನು ಆಶ್ರಯಿಸುತ್ತಿದ್ದಾರೆ. ಅದರಿಂದ ಹಿಂದೂಗಳು ಇತರ ಮತಸ್ಥರಾಗಿ ಬದಲಾಗಿಹೋಗುವುದಕ್ಕೆ ಹಿಂದೂಗಳಲ್ಲಿರುವ ಅಜ್ಞಾನಿಗಳ ಕೆಲಸಗಳೇ ಕಾರಣವೆಂದು ಹೇಳಬಹುದು. ಅದ್ವೈತವೆಂದರೇ, ದ್ವೈತವೆಂದರೇ ಹಿಂದೂಗಳ ಮತಸಿದ್ಧಾಂತವೆಂದು ಕೆಲವರನ್ನುತ್ತಿದ್ದರೂ ನಾವು ಪ್ರತಿಪಾದಿಸಿರುವ ತ್ರೈತಸಿದ್ಧಾಂತವನ್ನು ಗುರುತಿಸದವರು ಹಿಂದೂಗಳೆಂದು ಹೇಳಿಕೊಳ್ಳುವುದರಿಂದ ಹಿಂದೂ ಮತ ಕ್ಷೀಣಂಚಿನಲ್ಲಿ ಇದೆಯೆಂದು, ಹಿಂದೂಗಳು ತಮ್ಮಮೇಲೆ ತಾವೇ ದಾಳಿಮಾಡುವುದರಿಂದ, ಹಿಂದೂಮತದಲ್ಲಿ ಬಲವನ್ನು ಕೈಗೂಡಿಸುವ ಗುರುಗಳನ್ನು ಸಹಿತ ದೂಷಿಸುವುದು, ದಾಳಿಗಳು ಮಾಡುವು ದರಿಂದ, ಹಿಂದೂ ಮತದಲ್ಲಿ ಹಿಂದೂ ಧರ್ಮಗಳು ತಿಳಿಯದ ಅರಾಚಕ ಶಕ್ತಿಗಳ ನಾಯಕತ್ವದಿಂದ, ಹಿಂದೂ ಮತದಲ್ಲಿ ಕ್ಷೀಣತೆ ಏರ್ಪಡುತ್ತಿದೆ. ಹಿಂದೂಮತ ಕ್ಷೀಣತೆಗೆ ಹಿಂದೂಮತದಲ್ಲಿನ ಕುರುಡು ವಾದನೆಯು ಸಹ ಸ್ವಲ್ಪ ಜೊತೆಯಾಗಿದೆಯೆಂದು ಹೇಳಬಹುದು. ಇರುವ ಸತ್ಯವನ್ನು ಹೇಳುವುದಕ್ಕೆ ಸಹ ಭಯಪಡಬೇಕಾಗಿ ಬಂದಿದೆ. ಈಗ ಈ ಮಾತುಗಳು ಬರೆಯುವುದಕ್ಕು

ಸಹ ಎಷ್ಟೋ ಧೈರ್ಯವಿರಬೇಕು. ಇಲ್ಲದಿದ್ದರೇ ಇದು ಸತ್ಯವೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಅಂತಹ ಭಯಾನಕ ಸ್ಥಿತಿ ಈದಿನ ಹಿಂದೂಮತದಲ್ಲಿ ನೆಲೆಗೊಂಡಿದೆ.

ಕೆಲವರು ಹಿಂದೂ ನಾಯಕರಾಗಿ ಇರುವವರು 'ಹಿಂದೂ ಧರ್ಮ ರಕ್ಷಣೆ' ಎಂಬ ಹೆಸರನ್ನು ಅಡ್ಡವಿಟ್ಟುಕೊಂಡು ನಕಲಿ ಉಗ್ರವಾದಿಗಳಾಗಿ ಇರುತ್ತಾ ಇತರ ಹಿಂದೂ ಗುರುಗಳನ್ನೇ ಹಿಂಸಿಸುತ್ತಿದ್ದಾರೆ. ವೇದಗಳನ್ನೇ ದೊಡ್ಡದಾಗಿ ಹೇಳಬೇಕೆಂದು ಭಗವದ್ಗೀತೆಯನ್ನು ಹೇಳಬಾರದೆಂದು ಬೆದರಿಸುತ್ತಿದ್ದಾರೆ. ಗುರುಗಳು ಸಹಿತ ಆಧ್ಯಾತ್ಮಿಕ ಸತ್ಯಗಳನ್ನು ಬೋಧಿಸದೇ ಮತವಾದವನ್ನೇ ಬೋಧಿಸಿರೆಂದು, ಇಲ್ಲದೇ ಹೋದರೇ ತಮ್ಮಿಂದ ಕಷ್ಟಗಳು ತಪ್ಪುವುದಿಲ್ಲವೆಂದು ಎಚ್ಚರಿಕೆಗಳು ಜಾರಿಗೆ ಮಾಡುತ್ತಿದ್ದಾರೆ. ಹಿಂದೂಮತದಲ್ಲಿ ನಮ್ಮಂತಹ ಗುರುಗಳು ಸಹಿತ ಸ್ವತಂತ್ರವಾಗಿ ಜ್ಞಾನ ಬೋಧನೆ ಹೇಳುವುದಕ್ಕೆ ಅವಕಾಶವಿಲ್ಲವಾದ್ದರಿಂದ, ಧರ್ಮಗಳನ್ನು ಕುರಿತು ಬೋಧಿಸುವ ಅವಕಾಶವಿಲ್ಲದಿರುವುದರಿಂದ ಹಿಂದೂಮತವು ಕ್ಷೀಣಿಸುತ್ತಾ ಬರುತ್ತಿದೆ. ಈ ವಿಧವಾಗಿ ಬದಲಾಗಿಹೋದ ಹಿಂದೂಮತದಲ್ಲಿ ಗುರುಗಳು ಸಹಿತ ಸ್ವಂತ ಸಿದ್ಧಾಂತಗಳು ಹೇಳುವುದಕ್ಕಾಗಲೀ, ಸ್ವಂತ ಬೋಧನೆ ಹೇಳುವುದಕ್ಕಾಗಲೀ ಅವಕಾಶವಿಲ್ಲದ ಪರಿಸ್ಥಿತಿ ಏರ್ಪಟ್ಟಿದೆ. ಮುಖದ ಮೇಲೆ ಬೊಟ್ಟುಇಟ್ಟುಕೊಳ್ಳುವುದು ಒಂದು ಹಿಂದೂಗಳಲ್ಲಿಯೇ ಇದೆ. ಆದರೂ ತಮಗೆ ಇಷ್ಟವಿಲ್ಲದ ಗುರುತನ್ನು ಮುಖದಮೇಲೆ ಇಟ್ಟುಕೊಂಡರೇ ಅವರನ್ನು ಪರಮತದವರೆಂದು ಹೆಸರಿಟ್ಟು ಹಿಂದೂಗಳನ್ನೇ ಹಿಂಸಿಸುವ ಹಿಂದೂಗಳಿರುವುದರಿಂದ ನಾನು ತ್ರೈತಸಿದ್ಧಾಂತವನ್ನು ಭಗವದ್ಗೀತೆ ಯೊಳಗಿನದೆಂದು ಹೇಳಿದರೂ, ಭಗವದ್ಗೀತೆಯಲ್ಲಿ ತ್ರೈತಸಿದ್ಧಾಂತವನ್ನು ವರ್ಣಿಸಿ ಹೇಳಿದರೂ, ಭಗವದ್ಗೀತೆಯನ್ನು ಸಹ ಪರಮತಕ್ಕೆ ಸಂಬಂಧಿಸಿರುವುದೆಂದು ಅದನ್ನು ಬೋಧಿಸುವ ನಮ್ಮನ್ನು ಹಿಂದೂ ಮುಸುಗಿನಲ್ಲಿರುವ ಕ್ರೈಸ್ತಮತ ಪ್ರಚಾರದವರೆಂದು ಹೇಳುತ್ತಿದ್ದಾರೆ. ಇಂತಹ ಸಮಾಜದಲ್ಲಿ ಬೆರೆಯಲಾರದ ಹಿಂದೂಗಳು ಬಹಳಜನ ಇತರ ಮತದಲ್ಲಿ ಸೇರಿಹೋಗುವುದು ನಡೆಯುತ್ತಿದೆ.

ಇತರ ಮತಗಳಲ್ಲಿನ ಉಗ್ರವಾದಿಗಳು ಅವರ ಮತ ಅಭಿವೃದ್ಧಿಗೆ ಇತರ ಮತಗಳ ನಾಶಕ್ಕಾಗಿ ಕೆಲಸಮಾಡುತ್ತಿದ್ದರೇ, ಹಿಂದೂ ಮತದಲ್ಲಿನ ಉಗ್ರವಾದಿಗಳು ಹಿಂದೂಮತವನ್ನು ಉದ್ಧರಿಸುವುದಕ್ಕಾಗಿ ಹೇಳಿಕೊಳ್ಳುತ್ತಿದ್ದರೂ, ಅವರ ಕುರುಡು ಉಗ್ರವಾದದಿಂದ ಅವರ ಕೆಲಸಗಳೆಲ್ಲವೂ ಹಿಂದೂ ಮತ ಕ್ಷೀಣತೆಗಾಗಿಯೇ ಎಂದು ತಿಳಿಯುತ್ತಿದೆ. ನಾವು ಅಂತರ್ಮುಖ ಆಧ್ಯಾತ್ಮಿಕ ವಿಷಯಗಳನ್ನು, ಭಗವದ್ಗೀತೆ ಆಧಾರದಿಂದ, ಭಗವದ್ಗೀತೆಯಲ್ಲಿನ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿನ 16, 17 ಶ್ಲೋಕಗಳ ಆಧಾರದಿಂದ ಮೂರು ಆತ್ಮಗಳ ವಿಷಯವನ್ನು ಹೇಳಿದರೇ, ನೀವು ರಾಮನು ದೇವರೆಂದು ಏಕೆ ಹೇಳಲಿಲ್ಲವೆಂದು ನನೊಂದಿಗೆ ವಾದನೆಗೆ ಇಳಿದ ಹಿಂದೂ ರಕ್ಷಣೆ ವಾದಿಗಳು ಎಷ್ಟೋಜನರಿದ್ದಾರೆ. ಸನಾತನವಾದ ವೇದಗಳನ್ನು ಅಲ್ಲವೆಂದು ಭಗವದ್ಗೀತೆಯನ್ನು ಏಕೆ ಬೋಧಿಸುತ್ತಿದ್ದಾರೆಂದು ವೇದಗಳನ್ನು ಕುರಿತು ಏಕೆ ಹೇಳುತ್ತಿಲ್ಲವೆಂದು ನನ್ನನ್ನು ಬೆದರಿಸಿದ ಹಿಂದೂ ನಾಯಕರಿದ್ದಾರೆ. ಯಜ್ಞ ಯಾಗಾದಿಗಳಿಂದ ದೇವರು ತಿಳಿಯಲ್ಪಡುವುದಿಲ್ಲವೆಂದು ಭಗವದ್ಗೀತೆಯಲ್ಲಿ ವಿಶ್ವರೂಪ ಸಂದರ್ಶನ ಯೋಗದಲ್ಲಿರುವ 48, 53ನೇ ಶ್ಲೋಕಗಳಲ್ಲಿರುವ ಸಾರಾಂಶವನ್ನು ಹೇಳಿದರೇ, ನಮ್ಮನ್ನು ಪರ ಮತಸ್ಥರಾಗಿ ಚಿತ್ರಿಸಿದ ಹಿಂದೂಗಳು ಇದ್ದಾರೆ. ಭಗವದ್ಗೀತೆಯಲ್ಲಿ ಇದ್ದನ್ನು ಇದ್ದಹಾಗೆಯೆ ಹೇಳಿದ ಜ್ಞಾನವನ್ನು ಕೇಳಿದವರು ಕೆಲವರು ಸಂತೋಃಪಟ್ಟರೇ, ಕೆಲವರು ಮಾತ್ರ ಸನಾತನ ಧರ್ಮಗಳಾದ ವೇದಗಳನ್ನು, ಪುರಾಣಗಳನ್ನು ಹೇಳದೇ ಬಿಟ್ಟುಹಾಕುವವರು ಹಿಂದೂಗಳೇ ಅಲ್ಲವೆಂದು ನಮ್ಮ ಮೇಲೆ ದ್ವೇಷ ಪಡುತ್ತಿದ್ದಾರೆ. ಕೊನೆಗೆ ನಮ್ಮನ್ನು ಇತರ ಮತಗಳಿಗೆ ಸೇರಿದವರಾಗಿ ಪ್ರಚಾರ ಮಾಡಿ, ನಮ್ಮಮೇಲೆ ಉಗ್ರವಾದವನ್ನು ತೋರಿಸುವವರನ್ನು ಕುರುಡು ಉಗ್ರವಾದಿಗಳೆನ್ನದೇ ದೃಷ್ಠಿಯಿರುವವರೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಈ ವಿಧವಾಗಿ ಹಿಂದೂ ಮತದಲ್ಲಿನ ಉಗ್ರವಾದ ಯಾರಿಗೂ ಕಾಣಿಸದಂತೆ ಇದ್ದರೂ ಹೊರಗೆ ಕೆಲವರಿಗೆ ಮತ್ತು ನಮ್ಮಂಥವರಿಗೆ ಚೆನ್ನಾಗಿ ತಿಳಿಯುತ್ತಿದೆ. ಹಿಂದೂ ಉಗ್ರವಾದಿಗಳು ಇತರ ಮತಗಳ ಮೇಲೆ ದಾಳಿಮಾಡದಿದ್ದರೂ, ತಮ್ಮ ದ್ವೇಷವನ್ನು ಇತರ ಮತಗಳ ಮೇಲೆ ತೋರಿಸದಿದ್ದರೂ, ತಮ್ಮ ಮತದ

ಮೇಲೆಯೇ ಹೆಚ್ಚು ಒತ್ತಡ ಏರುತ್ತಿದ್ದಾರೆ. ಈ ವಿಧವಾಗಿ ಹಿಂದೂಮತಕ್ಕೆ ಸ್ವಲ್ಪ ಕೆಟ್ಟದ್ದನ್ನೇ ಉಂಟುಮಾಡುವ ಉಗ್ರವಾದವು ಹಿಂದೂಮತದಲ್ಲಿದೆ. ಹಿಂದೂ ಮತದಲ್ಲಿನ ಉಗ್ರವಾದದಿಂದ ಈ ಮಧ್ಯ ಕಾಲದಲ್ಲಿ ಬಹಳಜನ ಗ್ರಂಥಕರ್ತರು, ಒಳ್ಳೆಯ ಹೆಸರುಪಡೆದ ರಚಯಿತರು, ನಮ್ಮಂತಹ ಗುರುಗಳು ಬಹಳಜನ ಸ್ವಮತದಲ್ಲಿ ಅಸಂತೃಪ್ತಿ ಹೊಂದಿದ್ದಾರೆ. ಮೂಢನಂಬಿಕೆಯನ್ನು ಖಂಡಿಸಿದ ರಚಯಿತರ ಮೇಲೆ ದಾಳಿ ಸಹ ನಡೆದಂತೆ ಈ ಮಧ್ಯ ಕಾಲದಲ್ಲಿ ವಾರ್ತೆಗಳು ಸಹ ಬಹಳಬಂದಿವೆ. ಇದೆಲ್ಲಾ ಹಿಂದೂ ಮತದಲ್ಲಿನ ಅಜ್ಞಾನದಿಂದಲೇ ನಡೆಯುತ್ತಿದೆಯೆಂದೂ, ಇದು ಸ್ವಯಂಕೃತ ಅಪರಾಧವೇ ಎಂದು ಹೇಳುತ್ತಿದ್ದಾರೆ. ಇದರಿಂದ ಹಿಂದೂಮತಕ್ಕು ನಷ್ಟವೇ ಹೊರತು, ಲಾಭವಿಲ್ಲವೆಂದು ಹೇಳುತ್ತಿದ್ದಾರೆ.

**ಪ್ರಶ್ನೆ :– ಹಿಂದೂ ಮತದಲ್ಲಿನ ಅಜ್ಞಾನವನ್ನು ಅದರಿಂದ ಏರ್ಪಟ್ಟಿರುವ ಉಗ್ರವಾದವನ್ನು ಕುರಿತು ನೀವು ಇರುವುದು ಇದ್ದಹಾಗೆ ಹೇಳಿದ್ದೀರ. ಹಾಗೆ ಹೇಳುವುದರಿಂದ ಮತನಿಯಮವಾದಿಗಳಿಂದ ನಿಮಗೆ ಕಷ್ಟಗಳೇ ಉಂಟಾಗುವು ದಲ್ಲವೇ!**

**ಉತ್ತರ :–** ಈದಿನ ಹೊಸದಾಗಿ ಬರುವುವು ಏನೂ ಇಲ್ಲ. ಇದಕ್ಕು ಮೊದಲೇ ಎಲ್ಲಾ ತೊಂದರೆಗಳೂ ಬಂದಿವೆ. ನಾವು ಭಗವದ್ಗೀತೆಯನ್ನು ಅನುಸರಿಸಿ ಹಿಂದೂ ಧರ್ಮಗಳನ್ನು ಬೋಧಿಸಿದರೂ ನಮ್ಮನ್ನು ದೂಷಿಸುವುದು ನಡೆದಿದೆ. **ನಾವು ದೇವರು ದೇವರ ಜ್ಞಾನಕ್ಕೆ ಹೊರತುಪಡಿಸಿ ಮನುಷ್ಯರಿಗೆ ಭಯಪಡುವುದಿಲ್ಲ.**

**ಪ್ರಶ್ನೆ :– ಹಿಂದೂಗಳಿಂದ ಎಷ್ಟೋ ತೊಂದರೆಗಳು ಎದುರಾದರೂ ನೀವು ಹಿಂದೂ ಮತವನ್ನು ಬಿಟ್ಟು ಏಕೆ ಹೋಗಲಿಲ್ಲ?**

**ಉತ್ತರ :– "ಮತಬದಲಾವಣೆ ದೈವದ್ರೋಹ"** ಎಂದು ನಾನೇ ಒಂದು ಗ್ರಂಥವನ್ನು ಬರೆದಿದ್ದೇನೆ. ದೇವರು ಹುಟ್ಟಿಸಿರುವ ಮತವನ್ನು ಬಿಟ್ಟು ಬೇರೆ ಮತದೊಳಗೆ ಹೋಗುವುದು ಮಹಾಪಾಪವೆಂದು ಹೇಳಿದ್ದೇವೆ. ಅಂತಹ ನಾನು ಮತ ಬದಲಾಯಿಸಿಕೊಳ್ಳುವುದಂತೂ ಇರುವುದಿಲ್ಲ. ನಾನಿರುವವರೆಗು ಹಿಂದೂ

ಮತದಲ್ಲಿನ ಕಾಲುಷ್ಯವನ್ನು ತೆಗೆದುಹಾಕಿ ಹಿಂದೂಮತವನ್ನು ಸ್ವಚ್ಛವಾಗಿರುವಂತೆಯೂ, ಎಷ್ಟೋ ಶಕ್ತಿವಂತವಾಗಿರುವಂತೆಯೂ, ಎಷ್ಟೋ ಜ್ಞಾನದಿಂದ ಕೂಡಿಕೊಂಡಿರುವಂತೆಯೂ, ಇತರ ದೇಶಗಳೆಲ್ಲವೂ ಗುರುತಿಸುವಂತೆ ಮಾಡುವುದೇ ಧ್ಯೆಯವಾಗಿ ಇಟ್ಟುಕೊಂಡಿದ್ದೇನೆ.

**ಪ್ರಶ್ನೆ :– ನೀವು ಹಿಂದೂಮತದಲ್ಲಿ ಇದ್ದು ಪರಮತವನ್ನು ಸಮರ್ಥಿಸುತ್ತೀರಾ? ವಿಮರ್ಶಿಸುತ್ತೀರಾ?**

**ಉತ್ತರ :–** ಯಾವ ಮತದಲ್ಲಾದರೂ ದೈವಜ್ಞಾನವನ್ನು ಸಮರ್ಥಿಸುತ್ತೇನೆ. ಆದರೇ ಆ ಮತದಲ್ಲಿರುವ ಅಜ್ಞಾನವನ್ನು ವಿಮರ್ಶಿಸುತ್ತೇನೆ.

**ಪ್ರಶ್ನೆ :– ಕೆಲವರು ಹಿಂದೂಗಳು ನೀವು ಕ್ರೈಸ್ತರಿಗೆ ಅನುಕೂಲದವರೆಂದು, ಬೈಬಲ್ ಜ್ಞಾನವನ್ನು ಹೆಚ್ಚಾಗಿ ಹೇಳುತ್ತೀರೆಂದು ಅನ್ನುತ್ತಿರುತ್ತಾರೆ ಅದು ನಿಜವೇನಾ?**

**ಉತ್ತರ :–** ನನ್ನ ವಿಷಯದ ಏನೂ ತಿಳಿಯದವರು ಹಾಗೆ ಹೇಳುತ್ತಿರುತ್ತಾರೆ. **"ಶಿಲುಬೆ ದೇವರಾ?"** ಎಂಬ ಗ್ರಂಥದಲ್ಲಿ ಕ್ರೈಸ್ತರೆಲ್ಲರೂ ಆರಾಧಿಸುವ ಶಿಲುಬೆಯನ್ನು ವಿಮರ್ಶಿಸಿ ಬರೆಯುವುದು ನಡೆದಿದೆ. **"ಇಂದೂವು ಕ್ರೈಸ್ತನಾ?"** ಎಂಬ ಗ್ರಂಥವನ್ನು ಸಹ ಬರೆಯುವುದು ನಡೆದಿದೆ. ಅದರಲ್ಲಿ ಕ್ರೈಸ್ತರನ್ನು ವಿರೋಧಿಸುತ್ತಾ ಬರೆದ ವಿಷಯವೇ ಹೆಚ್ಚಾಗಿದೆ. ಆದಿಕಾಂಡವು ಸುಳ್ಳಿನ ಹುತ್ತ ಎಂದು ಹೇಳಿದ್ದೇನೆ. ಹಾಗಿರುವಾಗ ಅವರಿಗೆ ನಾನು ಅನುಕೂಲವೆಂದು ಹೇಗೆ ಹೇಳಬಲ್ಲರು? ನಾನು ಮೊದಲೇ ಹೇಳಿದ್ದೇನೆ, ಮೂರು ಮತಗ್ರಂಥಗಳೆನಲ್ಪಡುವವು ವಾಸ್ತವವಾಗಿ ಮತಗ್ರಂಥಗಳಲ್ಲ. ಅವುಗಳಲ್ಲಿ ಮತವೆಂಬ ಪ್ರಸ್ತಾವನೆಯೇ ಇಲ್ಲ. ಆದ್ದರಿಂದ ಅವುಗಳನ್ನು ದೈವಗ್ರಂಥಗಳೆನ್ನುತ್ತಿದ್ದೇವೆ. ಮತಗ್ರಂಥಗಳೆಂದು ಹೇಳುತ್ತಿಲ್ಲ. ಭಗವದ್ಗೀತೆ ಪ್ರಥಮ ದೈವಗ್ರಂಥವಾಗಿರುವಾಗ, ಬೈಬಲ್ ದ್ವಿತೀಯ ದೈವಗ್ರಂಥವು. ಖುರಾನ್ ಅಂತಿಮ ದೈವಗ್ರಂಥವಾಗುತ್ತಿದೆ. ದೈವಗ್ರಂಥಗಳಲ್ಲಿ ದೇವರ ಜ್ಞಾನವೇ ಇದ್ದರೂ ಅವುಗಳಲ್ಲಿ ಸ್ವಲ್ಪಜ್ಞಾನವನ್ನು ಸಹ ಮನುಷ್ಯರು ಬೆರೆಸಿಕೊಂಡಿದ್ದಾರೆ. ನಾವು ಮನುಷ್ಯರು ಬೆರೆಸಿಕೊಂಡ ಅಜ್ಞಾನವನ್ನು ಬಿಡದೆ ವಿಮರ್ಶಿಸುತ್ತಿದ್ದೇವೆ.

ಅದರಲ್ಲಿರುವ ಜ್ಞಾನವನ್ನು ಮಾತ್ರ ನೋಡುತ್ತಿದ್ದೇವೆ. ಆದ್ದರಿಂದ ನಾವು ಯಾವ ಗ್ರಂಥದಲ್ಲಿನ ಜ್ಞಾನವನ್ನು ಅಲ್ಲೆಗಳೆಯುತ್ತಿಲ್ಲ. ಮೂರು ಗ್ರಂಥಗಳಲ್ಲಿನ ಜ್ಞಾನವು ಸೃಷ್ಠಿ ಆದಿಯಲ್ಲಿ ದೇವರು ಹೇಳಿರುವ ಜ್ಞಾನವೇ ಆಗುವುದರಿಂದ ಮೂರು ಗ್ರಂಥಗಳನ್ನು ದೈವಗ್ರಂಥಗಳೆಂದೇ ನಾನು ಹೇಳುತ್ತಿದ್ದೇನೆ. ನಾನು ಮೂರು ಮತಗಳಲ್ಲಿನ ಪ್ರಜೆಗಳಿಗೆ ಅವರವರ ಜ್ಞಾನವನ್ನೇ ಸರಿಯಾದ ಪದ್ಧತಿಯಲ್ಲಿ ಸರಿಯಾದ ಭಾವನೆಯಿಂದ ತಿಳಿಸುತ್ತಿದ್ದೇನೆ. ಯಾವ ಮತದಲ್ಲಿ ಅಜ್ಞಾನವಿದ್ದರೂ ಆ ಮತವನ್ನು ವಿಮರ್ಶಿಸುತ್ತಾ, ಅವರಲ್ಲಿನ ಅಜ್ಞಾನವನ್ನು ಜ್ಞಾನವಾಗಿ ಬದಲಾಯಿಸುತ್ತಿದ್ದೇವೆ. ಯಾವ ಮತದಲ್ಲಿನ ಜ್ಞಾನವನ್ನಾದರೂ ಗೌರವಿಸುತ್ತಿದ್ದೇನೆ.

**ಪ್ರಶ್ನೆ :– ನೀವು ಕ್ರೈಸ್ತರಿಗೆ ವಿರುದ್ಧವಾಗಿ ಎರಡು ಮೂರು ಗ್ರಂಥಗಳನ್ನು ಬರೆದು ಅವರಿಗೆ ಸರಿಯಾದ ಜ್ಞಾನವನ್ನು ಹೇಳಿದ್ದಾರೆಂದು ಅನ್ನುತ್ತಿದ್ದಾರೆ. ಹಾಗೆಯೇ** ಮುಸ್ಲಿಮ್‌ರನ್ನು ಕುರಿತು ಬರೆದಿದ್ದೀರಾ?

**ಉತ್ತರ :–** ನಾನು ಹಿಂದೂಗಳಲ್ಲಿನ ಅಜ್ಞಾನವನ್ನು ತೆಗೆದುಹಾಕುವುದಕ್ಕೆ ಹಿಂದೂಗಳನ್ನು ಸಹ ವಿಮರ್ಶಿಸುತ್ತಾ, ಎಷ್ಟೋ ಪ್ರಶ್ನೆಗಳನ್ನು ಕೇಳಿ ಕೊನೆಗೆ ಹಿಂದೂಗಳ ಜ್ಞಾನ ಇಷ್ಟು ಶ್ರೇಷ್ಠವಾಗಿದೆ ನೋಡಿರಿ ಎಂದು ಹೇಳಿದ್ದೇನೆ. ಹಾಗೆಯೇ ಕ್ರೈಸ್ತರಲ್ಲಿನ ತಪ್ಪುಗಳನ್ನು ಹೊರಗೆ ತೋರಿಸಿ, ಅವರಿಗೆ ಅವರ ಬೈಬಲ್‌ನಲ್ಲಿನ ನಾಲಕ್ಕು ಸುವಾರ್ತೆಯಲ್ಲಿನ ಜ್ಞಾನವೇ ಸರಿಯಾದುದೆಂದು ಹೇಳಿದ್ದೇನೆ. ಮುಸ್ಲಿಮರಿಗೆ ಖುರಾನ್‌ನಲ್ಲಿ ತಿಳಿಯದ ಎಷ್ಟೋ ವಿಷಯಗಳಿಗೆ ವಿವರವನ್ನು ತಿಳಿಸಿ ಖುರಾನ್ ವಾಕ್ಯವನ್ನು ಅವರು ಎಲ್ಲಿ ತಪ್ಪಾಗಿ ಅರ್ಥ ಮಾಡಿಕೊಂಡಿದ್ದಾರೋ ಅಲ್ಲಿ ಅದು ತಪ್ಪು, ಇದು ಒಪ್ಪು ಎಂದು ಅಲ್ಲಾ ಹೇಳಿದ ಜ್ಞಾನವನ್ನು ಪ್ರಜೆಗಳೆಲ್ಲರಿಗೂ ಸುಲಭವಾಗಿ ಅರ್ಥವಾಗುವಂತೆ ಮಾಡಿದ್ದೇವೆ. ನಿಜವು ನಿಷ್ಠೂರದಿಂದ ಕೂಡಿಕೊಂಡಿರುತ್ತದೆ ಎಂದು ಹೇಳಿದಂತೆ, ನಾವು ಗ್ರಂಥದಲ್ಲಿನ ಸತ್ಯವನ್ನು ವಿವರಿಸಿ ಹೇಳಿದಾಗ ಕೆಲವರಿಗೆ ಅದು ಅರ್ಥವಾಗದೇ ಹೋಗಿರುವುದರಿಂದ ನಾವು ಅವರ ದೃಷ್ಠಿಯಲ್ಲಿ ಕೆಟ್ಟದಾಗಿ ಕಾಣಿಸಿರಬಹುದು. **ಇಲ್ಲಿಯವರೆಗು ಖುರಾನ್ ಗ್ರಂಥದಲ್ಲಿನ ವಾಕ್ಯಗಳಿಗೆ ಜ್ಞಾನ**

**ವಿವರವನ್ನು ಬರೆದು ಖುರಾನ್ ಗ್ರಂಥದಲ್ಲಿನ ಅವುಗಳ ಆಯತ್‌ಗಳ ದೊಡ್ಡತನವನ್ನು ಪ್ರಜೆಗಳಿಗೆ ತಿಳಿಸಿದ ಹಿಂದೂ ಗುರು ನಾನು ಒಬ್ಬನೇ ಎಂದು ಹೇಳುವುದಕ್ಕೆ ಗರ್ವಪಡುತ್ತಿದ್ದೇನೆ.** ಆ ವಿಷಯದಲ್ಲಿ ನಾವು ಬರೆದಿರುವುದನ್ನು ಓದದವರು ಹೊರತುಪಡಿಸಿ ಯಾರೂ ವಿರೋಧಿಸಲಿಲ್ಲ. ಓದಿದವರೆಲ್ಲಾ ನಮ್ಮನ್ನು ದೊಡ್ಡದಾಗಿ ಹೊಗಳಿ ಹೇಳಿದ್ದಾರೆ.

**ಪ್ರಶ್ನೆ :– ಮುಸ್ಲಿಮ್‌ರಲ್ಲಿ ಸಹ ಉಗ್ರವಾದವಿದೆಯೆಂದು, ಅದು ಎಲ್ಲರಿಗೂ ತಿಳಿದಿರುವ ಉಗ್ರವಾದವೇ ಎಂದೂ, ಮುಸ್ಲಿಮ್ ಉಗ್ರವಾದಿಗಳು ಎಷ್ಟೋ ಬಾಂಬು ದಾಳಿಗಳು, ಆತ್ಮಾಹುತಿ ದಾಳಿಮಾಡಿ ಎಷ್ಟೋಜನರನ್ನು ಸಂಹರಿಸಿದಂತೆ, ಪ್ರತಿ ನಿತ್ಯವು ಕೇಳುವ ವಾರ್ತೆಗಳಲ್ಲಿ ತಿಳಿದುಹೋಗುತ್ತಿದೆ. ಅದನ್ನು ಕುರಿತು ನೀವೇನು ಹೇಳುವಿರಿ?**

**ಉತ್ತರ :–** ಮುಸ್ಲಿಮ್‌ರಿಗೆ ದೇವರು ಅಂತಿಮ ದೈವಗ್ರಂಥವನ್ನು ಕೊಟ್ಟು ಅದರಲ್ಲಿ ಎಷ್ಟೋ ಜ್ಞಾನವನ್ನು ತಿಳಿಸಿದ್ದಾನೆ. ಆದರೂ ಅದು ಎಲ್ಲರಿಗೂ ಒಂದೇ ವಿಧವಾಗಿ ತಿಳಿಯದೆಹೋಗಿರುವುದರಿಂದ, ಮುಸ್ಲಿಮ್‌ಗಳಿಗು ಇತರ ಮತದವರಿಗು ಕೆಲವು ಅಭಿಪ್ರಾಯ ಬೇಧಗಳು ಏರ್ಪಟ್ಟು ಕೊನೆಗೆ ಅವು ಅಸೂಯೆಯಾಗಿ ಬದಲಾವಣೆ ಹೊಂದಿ, ಉಗ್ರವಾದದಕಡೆ ದಾರಿಮಾಡುತ್ತಿವೆ. ಅಂಥವರು ಸಹ ನಮಗೆ ತಗಲಿದ್ದಾರೆ. ನಮ್ಮ ಅನುಭವದಲ್ಲಿ ಉಗ್ರವಾದ ಭಾವನೆ ಇರುವವರನ್ನು ನೋಡಿದ್ದೇವೆ. ಎಲ್ಲಿಯಾದರೆ ಅಜ್ಞಾನ ಇದೆಯೋ ಅಲ್ಲಿ ಉಗ್ರವಾದ ಭಾವನೆಗಳು ಬೆಳೆದುಹೋಗುತ್ತಿವೆ. ಉಗ್ರವಾದವು ಒಂದು ಮತಕ್ಕೆ ಪರಿಮಿತವಾದುದಲ್ಲವೆಂದು, ಮನುಷ್ಯನಲ್ಲಿರುವ ಜ್ಞಾನವನ್ನು ಅನುಸರಿಸಿ ಮತಗಳೊಂದಿಗೆ ಪ್ರಮೇಯವಿಲ್ಲದೇ ಎಲ್ಲಕಡೆ ಎಲ್ಲ ಮತಗಳಲ್ಲಿ ಬೆಳೆದು ಹೋದರೂ, ಕೆಲವು ಮತಗಳಲ್ಲಿ ಬೂದಿ ಮುಚ್ಚಿದ ಕೆಂಡದಹಾಗೆ ಇದೆ. ಕೆಲವು ಮತಗಳಲ್ಲಿ ಮೊದಲೇ ಕೆಂಡದಂತೆ ಹೊರಗೆ ಕಾಣಿಸುತ್ತಿದೆ. ಬಹುಶಾ ಕೆಲವರು ಮುಸ್ಲಿಮ್‌ಗಳು ಕೆಲವು ದೇಶಗಳಲ್ಲಿ ಉರಿಯುವ ಅಗ್ನಿಯಹಾಗೆ ವಿಜೃಂಭಿಸಿ ಹಿಂಸೆಯನ್ನು ಸೃಷ್ಠಿಸುತ್ತಿರುವುದು ವಾಸ್ತವವೇ. ಆದರೇ ಭಾರತ ದೇಶದಲ್ಲಿರುವ ಮುಸ್ಲಿಮ್‌ಗಳೆಲ್ಲರೂ ಹಾಗೆಯೇ ಇರುವುದಿಲ್ಲ ಅಲ್ಲವೇ! ಕೆಲವರು ಜ್ಞಾನ ತಿಳಿದವರು ಎಷ್ಟೋ ಸೌಮ್ಯವಾಗಿ

ಇದ್ದಾರೆ. ಜ್ಞಾನ ತಿಳಿಯದವರಿಂದಲೇ ಉಗ್ರವಾದ ಸಮಸ್ಯೆ ಇದೆಯೆಂದು ಹೇಳಬಹುದು. ಅಂಥವರು ಆಗಾಗ ನಮಗೆ ತಟಸ್ಥ ಬೀಳುವುದು ನಡೆದಿದೆ. ಆದರೇ ನಮ್ಮೊಂದಿಗೆ ಮುಖಾಮುಖಿ ಮಾತನಾಡಿದವರು ತಾವು ಮಾಡುತ್ತಿರುವುದು ತಪ್ಪೆಂದು ತಿಳಿದುಕೊಂಡು, ನಮ್ಮನ್ನು ಗೌರವದಿಂದ ಮಾತನಾಡಿಸಿ ಹೋದವರು ಇದ್ದಾರೆ.

ನಮ್ಮನ್ನು ಎಲ್ಲೂ ನೋಡದವರು ನಮ್ಮನ್ನು ತಪ್ಪಾಗಿ ಭಾವಿಸಿಕೊಂಡು, ನಮ್ಮ ಮೇಲೆ ಅಸೂಯೆಯನ್ನು ಬೆಳೆಸಿಕೊಂಡವರು ಕೆಲವು ಸಂದರ್ಭಗಳಲ್ಲಿ ನಮ್ಮನ್ನು ಬೆದರಿಸುವುದು ಸಹ ನಡೆದಿದೆ. ಫೋನ್‌ಕನೆಕ್ಷನ್‌ನಲ್ಲಿ ಮಾತನಾಡಿದವರು ಯಾರೋ ತಿಳಿಯದೆ ಹೋದರೂ, ಅವರ ಮಾತುಗಳನ್ನು ಅನುಸರಿಸಿ ಅವರು ಉಗ್ರವಾದ ಭಾವನೆಗಳಿರುವವರೆಂದು ತಿಳಿಯುತ್ತಿದೆ. ನಮ್ಮ ಹಿಟ್ ಲಿಸ್ಟಿನೊಳಗೆ ನಿನ್ನನ್ನು ಸೇರಿಸಿಕೊಳ್ಳುತ್ತಿದ್ದೇವೆಂದು ಒಬ್ಬರು ಹೇಳಿದರೆ, ಮತ್ತೊಬ್ಬರು ನಿನ್ನನ್ನು ಟಾರ್ಗೆಟ್ ಮಾಡುತ್ತಿದ್ದೇವೆಂದು ಹೇಳಿದವರು ಸಹ ಇದ್ದಾರೆ. ಅವರೊಂದಿಗೆ ನಾನು ಮಾತನಾಡಿದಾಗ ಅವರ ಅಡ್ರೆಸ್ ಇಲ್ಲದೇ ಮಾತನಾಡುವುದು ನಡೆದಿದೆ. ಅವರು ಮಾತನಾಡಿದಕ್ಕೆ ನಾನು ಅವರನ್ನು ಕೇಳಿದ ಮಾತುಗಳನ್ನು ಕೆಳಗೆ ನೋಡಿರಿ.

**ಉಗ್ರವಾದಿ :–** ನಿನ್ನನ್ನು ಟಾರ್ಗೆಟ್ ಮಾಡುತ್ತಿದ್ದೇವೆ. ಇನ್ನು ನಿನ್ನ ಚಾಪ್ಟರ್ ಮುಗಿದುಹೋಗಿದೆ.

**ನಾನು :–** ಪ್ರತಿ ಮನುಷ್ಯನ ಜೀವನ ಯಾವಾಗಲೋ ಒಂದುಬಾರಿ ಮುಗಿದು ಹೋಗದೆ ತಪ್ಪುವುದಿಲ್ಲ. ನೀವುಯಾಕೆ ನನ್ನ ಚಾಪ್ಟರ್ ಮುಗಿಸಬೇಕೆಂದು ಕೊಳ್ಳುತ್ತಿದ್ದೀರಾ? ದೇಶದಲ್ಲಿ ಎಷ್ಟೋಜನ ಸ್ವಾಮೀಜಿಗಳು ಇರುವಾಗ, ಅಷ್ಟುಜನರನ್ನು ಅಲ್ಲವೆಂದು ನಿಮ್ಮ ದೃಷ್ಠಿ ನನ್ನ ಮೇಲೆ ಏಕೆ ಬಂದಿದೆ? ನನ್ನನ್ನು ಟಾರ್ಗೆಟ್ ಮಾಡಬೇಕಾದ ಅವಶ್ಯಕತೆ ಏನು ಬಂದಿದೆ?

**ಉಗ್ರವಾದಿ :–** ಉಳಿದ ಸ್ವಾಮೀಜಿಗಳೆಲ್ಲರೂ ಮತದ್ವೇಷ ಹೊಂದಿ ಪರಮತ

ವೆಂದು, ಇತರ ಮತಗಳ ಸಹವಾಸಕ್ಕೆ ಹೋಗದೆ, ತಮ್ಮ ಮತವನ್ನು ಕುರಿತು ಮಾತ್ರವೇ ಹೇಳಿಕೊಳ್ಳುತ್ತಿರುತ್ತಾರೆ. ನಾನು ಹಾಗಲ್ಲದೇ ಎಲ್ಲ ಮತಗಳು ಸಮಾನವೇ ಎಂದು, ಎಲ್ಲ ದೈವಗ್ರಂಥಗಳ ವಿಷಯಗಳು ಎಲ್ಲ ಮತದವರಿಗೆ ತಿಳಿಯಬೇಕೆಂದು, ಮುಸ್ಲಿಮ್‌ಗಳು ನಮ್ಮ ಗ್ರಂಥವೆಂದು ಹೇಳಿಕೊಳ್ಳುವ ಖುರಾನ್ ಗ್ರಂಥವನ್ನು ಕುರಿತು ತೆಲುಗು ಭಾಷೆಯಲ್ಲಿ ನಾನು **"ಅಂತಿಮ ದೈವಗ್ರಂಥದಲ್ಲಿ ಜ್ಞಾನ ವಾಕ್ಯಗಳು"** ಎಂಬ ಹೆಸರಿನಿಂದ ಬರೆಯುವುದರಿಂದ, ನನ್ನನ್ನು ಅನುಸರಿಸಿ ಹಿಂದೂಗಳು ಸುಮಾರು ಹತ್ತುಸಾವಿರಜನ ಖುರಾನ್ ಗ್ರಂಥವನ್ನು ಓದಲಾಗಿ ಅದರಲ್ಲಿನ ಜ್ಞಾನವನ್ನು ತಿಳಿದುಕೊಂಡಿದ್ದಾರೆ. ಹಾಗೆಯೇ ನಾನು ಬರೆದಿರುವ ಗ್ರಂಥವನ್ನು ಓದಿ ಮುಸ್ಲಿಮ್‌ಗಳು ಸಹ ಇಲ್ಲಿಯವರೆಗು ನಮಗೆ ತಿಳಿಯದ ರಹಸ್ಯಗಳೆಷ್ಟೋ ಈ ಗ್ರಂಥದಲ್ಲಿ ತಿಳಿದಿವೆಯೆಂದು ಸಂತೋಷಪಡುತ್ತಿದ್ದಾರೆ. ಅದರಿಂದ ಮುಸ್ಲಿಮ್‌ರವರದೇ ಖುರಾನ್ ಗ್ರಂಥವೆಂಬ ಅಸೂಯೆ ಹೋಗಿ, ನಮ್ಮೆಲ್ಲರದು ಖುರಾನ್ ಗ್ರಂಥವೆಂದು ಉಳಿದ ಮತದವರೆಲ್ಲರೂ ಹೇಳುತ್ತಿದ್ದಾರೆ. ನಾನು ಒಂದು ಖುರಾನ್ ಗ್ರಂಥಕ್ಕೇ ಅಲ್ಲದೇ, ಮೂರುಮತದವರು ಹೇಳಿಕೊಳ್ಳುವ ಮೂರು ಗ್ರಂಥಗಳನ್ನು ವಿವರಿಸಿ ಬರೆದಿದ್ದೇನೆ. ಅದರಿಂದ ಮೂರು ಗ್ರಂಥಗಳಲ್ಲಿನ ಜ್ಞಾನ ಪ್ರಜೆಗಳೆಲ್ಲರಿಗೂ ತಿಳಿದುಹೋಗಿ ದೇವರು ಎಲ್ಲರಿಗೂ ಒಬ್ಬನೇ, ಗ್ರಂಥದಲ್ಲಿನ ಜ್ಞಾನ ಒಂದೇಯೆಂಬ ಭಾವನೆಯೊಳಗೆ ಬಂದು ಮತದ್ವೇಷಗಳನ್ನು ಬಿಟ್ಟು ಮತಸಾಮರಸ್ಯವಾಗಿ ಇರುತ್ತಿದ್ದಾರೆ. ಇದರಲ್ಲಿ ನಿಮಗೆ ಕಾಣಿಸದ ಕೆಟ್ಟದು ಏನೋ ಹೇಳಿರಿ. ನಾನು ಮಾಡಿರುವುದರಲ್ಲಿ ಸ್ವಲ್ಪ ಕೆಟ್ಟದಿದ್ದರೂ ನೀವು ನನ್ನನ್ನು ಟಾರ್ಗೆಟ್ ಮಾಡುವುದರಲ್ಲಿ ಯಾವ ತಪ್ಪಿರುವುದಿಲ್ಲ. ನಿಮಗೆ ಕಾಣಿಸದ ತಪ್ಪೇನೋ ಹೇಳಿರಿ.

**ಉಗ್ರವಾದಿ :–** ನೀವು ನಮಗೆ ಸರಿಹೋಗದ ವಿಷಯವನ್ನು ಬರೆದಿದ್ದೀರ.

**ನಾನು :–** ನಾವು ಎಲ್ಲಿ ಬರೆದರೂ ಶಾಸ್ತ್ರಬದ್ಧವಾದ ವಿಷಯವನ್ನೇ, ಸತ್ಯವಾದ ವಿಷಯವನ್ನೇ, ಗ್ರಂಥಗಳಲ್ಲಿ ದೇವರು ಹೇಳಿರುವ ವಿಷಯವನ್ನೇ ಬರೆದಿರುತ್ತೇವೆ. ಅಷ್ಟೇಹೊರತು ತಪ್ಪಾಗಿರುವ ವಿಷಯವನ್ನಾಗಲೀ, ದೇವರು ಹೇಳದ ವಿಷಯವನ್ನಾಗಲೀ, ಅಸತ್ಯ ವಿಷಯವನ್ನಾಗಲೀ ಯಾವಾಗಲೂ ಎಲ್ಲೂ ಹೇಳಲಿಲ್ಲ. ನಿಮಗೆ ಸರಿಹೋಗದ ವಿಷಯವೇನೋ ಹೇಳಿರಿ.

**ಉಗ್ರವಾದಿ :–** ನೀವು ತೌರಾತ್ ಗ್ರಂಥವನ್ನು ಭಗವದ್ಗೀತೆಯೆಂದು ಹೇಳಿದ್ದೀರ. ಮೂಸಾಪ್ರವಕ್ತ ಶ್ರೀಕೃಷ್ಣನು ಒಬ್ಬನೇ ಎಂದು ಹೇಳುತ್ತಿದ್ದೀರ. ನೀವು ಯಾವ ಆಧಾರದಿಂದ ಹಾಗೆ ಹೇಳುತ್ತಿದ್ದೀರ? ಈ ವಿಷಯದಲ್ಲಿ ನಾವು ಪೂರ್ತಿ ವಿರೋಧಿಸುತ್ತಿದ್ದೇವೆ.

**ನಾನು :–** ನಾನು ಹೇಳಿರುವುದು ತೌರಾತ್ ಗ್ರಂಥವನ್ನು ಕುರಿತು ಹೇಳುತ್ತಾ, ತೌರಾತ್ ಗ್ರಂಥದಲ್ಲಿನ ಜ್ಞಾನವೇ ಭಗವದ್ಗೀತೆಯಲ್ಲಿದೆ. ಆದ್ದರಿಂದ ತೌರಾತ್ ಭಗವದ್ಗೀತೆ ಎರಡೂ ಒಂದೇ ಎಂದು ಹೇಳಿದ್ದೇವೆ. ಅಷ್ಟೇಅಲ್ಲದೆ ಮೂಸಾ ಪ್ರವಕ್ತ, ಕೃಷ್ಣನು ಇಬ್ಬರೂ ಒಂದೇ ಎಂದು ಹೇಳಿದ್ದೇವೆ. ಇಂದಿನವರೆಗು ಈ ವಿಷಯವನ್ನು ಯಾರೂ ಎಲ್ಲೂ ಹೇಳಲಿಲ್ಲ. ಆದ್ದರಿಂದ ನಾವು ಹೇಳಿದಾಗ ಈ ವಿಷಯವು ಪೂರ್ತಿ ಹೊಸದಾಗಿ ಕಾಣಿಸುತ್ತಿದೆ. ಸರಿ! ನೀವಂದಹಾಗೆ ನಾನು ಹೇಳಿರುವುದು ತಪ್ಪೇ ಎಂದುಕೊಳ್ಳೋಣ. ತೌರಾತ್ ಗ್ರಂಥವೆಂದರೇ ನಿಮ್ಮ ದೃಷ್ಠಿಯಲ್ಲಿ ಏನೆಂದುಕೊಳ್ಳುತ್ತಿದ್ದೀರ? ನೀವು ಯಾವಾಗಲಾದರೂ ಆ ಗ್ರಂಥವನ್ನು ನೋಡಿದ್ದೀರಾ? ಅದು ಯಾವ ಭಾಷೆಯಲ್ಲಿ ಬರೆಯಲಾಗಿದೆಯೋ ತಿಳಿದಿದೆಯಾ? ಅದರ ಗ್ರಂಥಕರ್ತ ಯಾರೋ ಗೊತ್ತಾ? ಮೂಸಾ ಪ್ರವಕ್ತನೇ ಆ ಗ್ರಂಥವನ್ನು ಬರೆದಿದ್ದಾನೆಂದು ಎಲ್ಲರೂ ಹೇಳುತ್ತಿದ್ದಾರೆ. ವಾಸ್ತವವಾಗಿ ಮೂಸಾ ಪ್ರವಕ್ತ ಆ ಗ್ರಂಥವನ್ನು ಬರೆದಿದ್ದಾನೆಂದು ಯಾರಾದರೂ ಧೈರ್ಯವಾಗಿ ಹೇಳಬಲ್ಲರಾ? ತೌರಾತ್ ಎನ್ನುವುದು ಭಗವದ್ಗೀತೆ ಅಲ್ಲವೆಂದು ಹೇಳುವುದಕ್ಕೆ ಯಾರಹತ್ತಿರವಾದರೂ ಆಧಾರವಿದೆಯಾ? ತೌರಾತ್ ಎಂದರೇ ಭಗವದ್ಗೀತೆ ಅಲ್ಲವೆಂದು ನೀವು ಹೇಳಬಲ್ಲಿರಾ? ಇಷ್ಟು ಪ್ರಶ್ನೆಗಳಿಗೆ ಉತ್ತರ ನಿಮ್ಮಬಳಿ ಇದೆಯಾ?

**ಉಗ್ರವಾದಿ :–** ತೌರಾತ್ ಎಂದರೇ ಭಗವದ್ಗೀತೆ ಎಂದು ನೀವೆ ಬರೆದಿದ್ದೀರ. ಆದ್ದರಿಂದ ಅದು ಹೇಗೆ ಭಗವದ್ಗೀತೆ ಆಗಿದೆಯೋ ಹೇಳಿರಿ. ತೌರಾತ್ ಎಂದರೇ ಖುರಾನ್‌ಗಿಂತಲೂ, ಬೈಬಲ್‌ಗಿಂತಲೂ ಮೊದಲು ಬಂದಿರುವ ಗ್ರಂಥವೆಂದು ಹೇಳುತ್ತಿದ್ದೇವೆ.

**ನಾನು:–** ನೀವು ಹೇಳಿದಂತೆ ಬೈಬಲ್ (ಇಂಜೀಲು), ಖುರಾನ್ ಗ್ರಂಥಕ್ಕಿಂತಲೂ ಮೊದಲು ಬಂದಿರುವ ಗ್ರಂಥ ತೌರಾತ್ ಎನ್ನುವುದು ವಾಸ್ತವವೇ! ಅದೇ ವಿಷಯವನ್ನೇ ನಾವು ಸಹ ಹೇಳುತ್ತಿದ್ದೇವೆ. ತೌರಾತ್ ಎಂದರೇ ಏನೋ ಅದರ ಹೆಸರಿನಲ್ಲಿರುವ ವಿವರವೇನೋ ಇದಕ್ಕು ಮೊದಲು ಬರೆದಿರುವ **"ಅಂತಿಮ ದೈವಗ್ರಂಥದಲ್ಲಿ ಜ್ಞಾನ ವಾಕ್ಯಗಳು"** ಎಂಬ ಗ್ರಂಥದಲ್ಲಿ ವಿವರಿಸಿ ಹೇಳಿದ್ದೇವೆ. ಅಲ್ಲಿ ತೌರಾತ್ ಎಂಬ ಹೆಸರಿಗೆ ಮಾತ್ರ ಅರ್ಥವನ್ನು ಹೇಳಿದ್ದೇವೆ. ಹಾಗೆಯೇ ಮೂಸಾನನ್ನು ಕುರಿತು ಸಹ ಸ್ವಲ್ಪ ಹೇಳಿದ್ದೇವೆ. ತೌರಾತ್ ಎಂದರೇ ಭಗವದ್ಗೀತೆಯೇಯೆಂದು ಪೂರ್ತಿ ವಿವರವಾಗಿ ಎಲ್ಲರಿಗೂ ಅರ್ಥವಾಗುವಂತೆ, ಎಲ್ಲರ ಪ್ರಶ್ನೆಗಳಿಗೆ ಉತ್ತರ ಇರುವಹಾಗೆ ನಾವು ಬರೆಯುವಂತಹ ಗ್ರಂಥವಾದ **"ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು ಎರಡನೆಯ ಭಾಗದಲ್ಲಿ"** ಬರೆಯಲು ಆಲೋಚಿಸುತ್ತಿದ್ದೇವೆ. ಮೊದಲ ಭಾಗದಲ್ಲಿ ಇಂದಿಗೂ ಬಹಳ ಸಮಾಚಾರವನ್ನು ಅದರ ಹೆಸರಿನಲ್ಲೇ ಇರುವಂತೆ ಬರೆದಿದ್ದೇವೆ. ನೀವು ಗ್ರಂಥವನ್ನು ಓದಿದರೇ ಆ ವಿಷಯವು ಸ್ವಲ್ಪವಾದರೂ ಅವಗಾಹನೆಗೆ ಬರಬಲ್ಲದು.

**ಉಗ್ರವಾದಿ :–** ನೀವು ಬರೆದಿರುವ ಗ್ರಂಥವನ್ನು ನಾವು ಓದುವುದಿಲ್ಲ. ಅಸಲು ನಮ್ಮ ಗ್ರಂಥವನ್ನು ಕುರಿತು ಬರೆಯುವುದಕ್ಕೆ ನೀವು ಯಾರು? ನಮ್ಮ ಗ್ರಂಥದಲ್ಲಿ ಕೈಯಿಡುವುದೇ ದೊಡ್ಡ ತಪ್ಪು.

**ನಾನು :–** ನೀವು ಈ ಮಾತನ್ನು ಮಾತನಾಡುವುದೇ ದೊಡ್ಡ ತಪ್ಪೆಂದು ನಾನೂ ಹೇಳುತ್ತಿದ್ದೇನೆ. ಇತರರ ತಪ್ಪನ್ನು ಎಣಿಸುವಮುನ್ನ ಸ್ವಲ್ಪ ಆಲೋಚಿಸಿ ಮಾತನಾಡುವುದು ಒಳ್ಳೆಯದು. ಖುರಾನ್ ನಮ್ಮ ಗ್ರಂಥವೆನ್ನುವುದು ನಿಮ್ಮದೇ ತಪ್ಪಾಗುವುದು. ಖುರಾನ್ ಗ್ರಂಥವು ಒಂದು ಮುಸ್ಲಿಮ್ ಮತದವರಿಗೆಂದು ಗ್ರಂಥದಲ್ಲಿ ಎಲ್ಲೂ ಹೇಳಲಿಲ್ಲ. ಅಷ್ಟೇ ಅಲ್ಲದೆ ಮತಪ್ರಸ್ತಾವನೆ ಆ ಗ್ರಂಥದಲ್ಲಿ ಇಲ್ಲವೇ ಇಲ್ಲ. ಖುರಾನ್‌ದೈವಗ್ರಂಥವು, ಸರ್ವ ಮಾನವರಿಗೂ ಸಂಬಂಧಿಸಿರುವುದು. ಆ ವಿಷಯವು ಖುರಾನ್ ಗ್ರಂಥದಲ್ಲಿ ಸೂರಾ 81, ಆಯತ್ 27ರಲ್ಲಿ ಹೀಗೆ ಬರೆದಿದ್ದಾರೆ ನೋಡಿರಿ. **(81–27) "ಇದು ಸಮಸ್ತ ಲೋಕವಾಸಿಗಳಿಗಾಗಿ**

**ಹಿತೋಪದೇಶ. (14–52) "ಈ ಖುರಾನ್ ಸಮಸ್ತ ಮಾನವರಿಗಾಗಿ ಒಂದು ಸಂದೇಶ. ಅದರಮೂಲಕ ಅವರನ್ನು ಎಚ್ಚರಿಸುವುದಕ್ಕೆ, ದೇವರು ಒಬ್ಬನೇ ಆರಾಧ್ಯ ದೈವವೆಂದು ಅವರು ಗ್ರಹಿಸುವುದಕ್ಕೆ ಇದು ಕಳುಹಿಸಲಾಗಿದೆ."** ಈ ವಿಧವಾಗಿ ಖುರಾನ್‌ನಲ್ಲಿಯೇ ಸರ್ವಮಾನವರಿಗೆ ಎಂದು ಹೇಳಿದ್ದರೇ, ಖುರಾನ್ ನಮ್ಮ ಗ್ರಂಥವೆಂದು ನೀವು ಅನ್ನುವುದರಲ್ಲಿ ಅರ್ಥವೇ ಇಲ್ಲ. ನಮ್ಮ ಗ್ರಂಥವೆಂದು ಯಾರಾದರೇ ಅಂದಿದ್ದಾರೋ ಅವರು ದೈವಗ್ರಂಥವಾದ ಖುರಾನ್‌ಗೆ ವಿರುದ್ಧವಾಗಿ ಮಾತನಾಡಿದಂತಾಗುವುದು. ಈ ಮಾತಿಗೆ ನೀವು ದೇವರ ಮುಂದೆ ಸಮಧಾನ ಹೇಳಬೇಕಾಗಿರುತ್ತದೆ. ಖುರಾನ್ ಗ್ರಂಥವು ನಿಮಗೆಷ್ಟು ದೊಡ್ಡದೋ ನಮಗೂ ಅಷ್ಟೇ ದೊಡ್ಡದು. ಆದ್ದರಿಂದ ಖುರಾನ್‌ನನ್ನು ಎಲ್ಲರೂ ಗೌರವಿಸುವಂತೆ, ಎಲ್ಲರಿಗೂ ಅದರಲ್ಲಿನ ವಿಷಯಗಳು ತಿಳಿಯುವಂತೆ ನಾವು ಬರೆದಿದ್ದೇವೆ. ನಾವು ಬರೆಯುವುದರಿಂದ ಎಷ್ಟೋಜನರು ಓದಿದ್ದಾರೆ. ಹಿಂದೂಗಳ ಗ್ರಂಥಗಳಾಗಿ ಹೇಳುತ್ತಿರುವ ಭಗವದ್ಗೀತೆಯನ್ನು, ವೇದಗಳನ್ನು, ಉಪನಿಷತ್ತುಗಳನ್ನು, ಪುರಾಣಗಳನ್ನು ಕುರಿತು ಬಹಳಜನ ಮುಸ್ಲಿಮ್ ಪವಕ್ತರು ತಮ್ಮ ಉಪನ್ಯಾಸಗಳಲ್ಲಿ ಸಂಸ್ಕೃತ ಶ್ಲೋಕಗಳೊಂದಿಗೆ ಸಹ ಹೇಳುತ್ತಿದ್ದಾರೆ. ಹಾಗೆಯೇ ಮುಸ್ಲಿಮ್ ಪಂಡಿತರು ಭಗವದ್ಗೀತೆಯನ್ನು, ವೇದಗಳನ್ನು ಅವುಗಳಲ್ಲಿನ ವಿಷಯಗಳನ್ನು ಕೆಲವು ಪುಸ್ತಕಗಳಲ್ಲಿ ಬರೆಯುವುದು ನಡೆದಿದೆ. ಆಗ ಹಿಂದೂಗಳು ಯಾರೂ ಇವು ನಮ್ಮ ಗ್ರಂಥಗಳು ಇವುಗಳನ್ನು ನೀವು ಏಕೆ ಬರೆದಿದ್ದೀರೆಂದು ಕೇಳಲಿಲ್ಲ ಅಲ್ಲವೇ! ಹಾಗೆ ಬರೆಯುವುದರಿಂದ ಮತ ಸಾಮರಸ್ಯ ಏರ್ಪಡುವುದು. ಒಬ್ಬರನೊಬ್ಬರು ಅರ್ಥಮಾಡಿಕೊಳ್ಳುವುದಕ್ಕೆ, ಒಬ್ಬರಿಗೊಬ್ಬರು ಸೇರಿ ಬೆರೆತು ತಿರುಗುವುದಕ್ಕೆ ಅವಕಾಶವಿದೆ. ಇಂತಹ ಒಳ್ಳೆಯ ಕೆಲಸವನ್ನು ಕೆಟ್ಟದಾಗಿ ಹೇಳುವುದು, ತಪ್ಪು ಎಂದು ಹೇಳುವುದರಲ್ಲಿ ನಿಮ್ಮ ಉದ್ದೇಶವೇನೋ ನಮಗೆ ತಿಳಿದಿಲ್ಲ.

**ಉಗ್ರವಾದಿ :–** ನೀವು ಹೇಳುವುದನ್ನು ನಾವು ಕೇಳಬೇಕೆಂದುಕೊಳ್ಳಲಿಲ್ಲ. ನೀವು ಬರೆಯುವುದನ್ನು ನಾವು ಓದಬೇಕೆಂದುಕೊಳ್ಳಲಿಲ್ಲ. ನಿಮ್ಮ ಮೇಲೆ ನಾವು ಒಂದು ಕಣ್ಣು ಇಟ್ಟುಕೊಂಡಿದ್ದೇವೆಂದು ಮರೆಯಬೇಡಿ.

**ನಾನು:–** ನೀನು ದೇವರೆಂದು ಹೇಳುವ ಅಲ್ಲಾಹ್‌ಗೆ ತಿಳಿಯದೇ ಪ್ರಪಂಚದಲ್ಲಿ ಏನು ನಡೆಯುವುದಿಲ್ಲ. ಅಲ್ಲಾಹ್ ಆಜ್ಞೆ ಇಲ್ಲದೆ ಏನು ನಡೆಯುವುದಿಲ್ಲ. ನಿಮಗೆ, ನನಗೆ ಎಲ್ಲರಿಗೂ ದೊಡ್ಡವನು ಅಲ್ಲಾಹ್. ಆತನು ಏನು ಅಂದುಕೊಂಡರೇ ಅದು ನಡೆಯುತ್ತದೆ. ಮನುಷ್ಯ ಸ್ವತಃವಾಗಿ ಏನು ಮಾಡಲಾರೆನೆಂದು ಖುರಾನ್ ಗ್ರಂಥದಲ್ಲಿ 18ನೇ ಸೂರಾದಲ್ಲಿ 23ನೇ ಆಯತ್‌ನಲ್ಲಿ ಹೀಗೆ ಹೇಳಿದ್ದಾರೆ ನೋಡು. **(18–23) "ಯಾವ ವಿಷಯದಲ್ಲಿ ಸಹ ನಾನು ನಾಳೆ ಈ ಕೆಲಸವನ್ನು ಮಾಡುತ್ತೇನೆಂದು ಹೇಳಬೇಡ. ನೀನು ಏನೂ ಮಾಡಲಾರೆ"** ಎಂದು ಇದೆ. ಇದರ ಪ್ರಕಾರ ಯಾವ ಮಾನವನು ಯಾವುದನ್ನು ಸ್ವತಃವಾಗಿ ಮಾಡಲಾರನೆಂದು ತಿಳಿಯುತ್ತಿದೆ. ದೇವರಿಗೆ ಇಷ್ಟವಾದಾಗಲೇ ಯಾವ ಕೆಲಸವಾದರೂ ನಡೆಯಬಲ್ಲದು. ದೇವರ ಇಷ್ಟದಲ್ಲಿ ನಾನು ಬದುಕಬಾರದು ಎಂದು ಇದ್ದರೇ, ಆ ತೀರ್ಪನ್ನು ಶಿರಸಾ ವಹಿಸಿ ಯಾರಾದರೂ ಒಪ್ಪಿಕೊಳ್ಳಬೇಕಾಗಿರುವುದೇ. ದೇವರಿಗೆ ಇಷ್ಟವಿಲ್ಲದಿರುವುದನ್ನು ಯಾವ ಮಾನವನು ಮಾಡಲಾರನು. ಹಾಗಿರುವಾಗ ನೀನು ಏನೋ ಅಂದಿರುವೆ ಎಂದು ನಾನು ಏಕೆ ಬೆಚ್ಚಿಬೀಳಬೇಕು! "ಸರ್ವ ಕಾರ್ಯಾಚರಣೆ ಮಾಡಿಸುವವನು ದೇವರೇ!" ಎಂದು ತಿಳಿದಾಗ ಎಲ್ಲರೂ ದೇವರಿಗೇ ಭಯಪಡಬೇಕೆ ಹೊರತು ಮನುಷ್ಯರಿಗೆ ಭಯಪಡಬಾರದು. ಹಾಗೆ ಭಯಪಟ್ಟರೇ ಅದು ಅಜ್ಞಾನವಾಗುವುದು. ಅಧರ್ಮವಾಗುವುದು ಅದನ್ನೇ ಪರಧರ್ಮವೆಂದು ಸಹ ಹೇಳುತ್ತಾರೆ. ಈ ವಿಷಯವಾಗಿ ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಕರ್ಮಯೋಗವೆಂಬ ಅಧ್ಯಾಯದಲ್ಲಿ 35ನೇ ಶ್ಲೋಕದಲ್ಲಿ ಹೀಗೆ ಹೇಳಿದ್ದಾರೆ ನೋಡಿರಿ.

***ಶ್ಲೋ॥ ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್।***
***ಸ್ವಧರ್ಮೇನಿಧನಂ ಶ್ರೇಯಃ ಪರಧರ್ಮೋಭಯಾವಹಾಃ॥***

**ಭಾವವು : "ಗುಣವಿಲ್ಲದ ಸ್ವಂತ ಧರ್ಮವೇ ಶ್ರೇಷ್ಠವಾದುದು. ಅನ್ಯ ಧರ್ಮ (ಪರಧರ್ಮ) ಎಷ್ಟು ಆಚರಣೆ ಯೋಗ್ಯವಾಗಿದ್ದರೂ, ಪರಧರ್ಮದಲ್ಲಿನ ಭಯಕ್ಕಿಂತಲೂ ಸ್ವಧರ್ಮದಲ್ಲಿ ಮರಣವಾದರೂ ಮೇಲು"** ಎಂದು ಹೇಳಲ್ಪಟ್ಟಿದೆ.

ಅಜ್ಞಾನದಲ್ಲಿ ಭಯದಿಂದ ಬದುಕುವುದಕ್ಕಿಂತಲೂ, ಜ್ಞಾನದಲ್ಲಿ ಎಂದರೇ ಆತ್ಮಧರ್ಮದಲ್ಲಿ ಮರಣವೇ ಮೇಲೆಂದು ದೇವರೇ ಗೀತೆಯಲ್ಲಿ ಹೇಳಿದ್ದಾನೆ. ದೈವಜ್ಞಾನವನ್ನು ತಿಳಿದ ಮನುಷ್ಯನಾಗಿ ನನಗೆ ಭಯವಿಲ್ಲ. **ಸ್ವಚ್ಛವಾದ ದೈವಜ್ಞಾನವನ್ನು ಪ್ರಕಟಿಸುವುದೇ ನನ್ನ ಜೀವನ ಧ್ಯೇಯ**. ಹಾಗಿರುವಾಗ ನನ್ನ ಕರ್ತವ್ಯವನ್ನು ಯಾರೂ ತಡೆಯಲಾರರು. ನನಗೆ ಮೂರು ಮತಗಳು ಒಂದೇ. ಮೂರು ಮತಗ್ರಂಥಗಳಲ್ಲಿ ಹೇಳಿರುವ ಜ್ಞಾನವು ಒಂದೇ. ಮೂರು ದೈವಗ್ರಂಥಗಳಲ್ಲಿ ಒಬ್ಬನೇ ದೇವರು ಕಾಣಿಸುವುದರಿಂದ, ನಮ್ಮ ಬಳಿ ಬೇರೆ ಮತವಿಲ್ಲ, ಬೇರೆ ದೇವರಿಲ್ಲ. ಎಲ್ಲರೂ ಮನುಷ್ಯರೇ ಎಲ್ಲರಿಗೂ ದೇವರು ಒಬ್ಬನೇ.

ಈ ವಿಧವಾಗಿ ಎಷ್ಟೋಜನ ಮುಸ್ಲಿಮ್‌ಗಳಿಂದ ಬೆದರಿಕೆಗಳು ಬಂದರೂ ನಾನು ನಾನಾಗಿಯೇ ಇದ್ದೇನೆ. ನನ್ನ ಕೆಲಸ ನನ್ನಕೆಲಸವಾಗಿಯೇ ಇದೆ. ಕಳೆದ ನಲವತ್ತು (40) ವರ್ಷಗಳಿಂದ ಜ್ಞಾನಮಾರ್ಗದಲ್ಲಿ ನಾವು ಎಷ್ಟೋ ಆಡಚಣೆಗಳನ್ನು ಎದರಿಸುತ್ತಿದ್ದೇವೆ. ಇವೆಲ್ಲವೂ ಮನುಷ್ಯನ ಜೀವನದಲ್ಲಿ ಸಹಜವೇ ಎಂದು ನಮಗೆ ತಿಳಿದಿದೆ. ಆದ್ದರಿಂದ ಅಂತಹ ಬೆದರಿಕೆಗಳ ಮೂಲಕ ನಾವು ದೈವಕಾರ್ಯಗಳನ್ನು ಮಾಡದೇ ಬಿಡಲಿಲ್ಲ. ಆದರೇ ಮುಖ್ಯವಾಗಿ ಹೇಳಬೇಕಾಗಿರುವ ವಿಷಯ ಏನೆಂದರೇ! ಮುಸ್ಲಿಮ್‌ರು ಹೆಚ್ಚಾಗಿ ಬೆದರಿಸಿದ್ದಾರೆ. ಆದರೇ ಅವರಿಂದ ಎಂತಹ ನಷ್ಟವಾಗಲೀ, ಕಷ್ಟವಾಗಲೀ ನಡೆಯಲಿಲ್ಲ. ನಮಗೆ ನಡೆದಿರುವುದೆಲ್ಲಾ ಹಿಂದೂಗಳಿಂದ ಹೆಚ್ಚು ಕಷ್ಟನಷ್ಟಗಳು ನಡೆದಿವೆ. ನಮ್ಮನ್ನು ಹಿಂದೂಗಳೆಂದು ನೋಡದೇ, ಪರಮತವೆಂಬ ನೆಪವನ್ನು ತೋರಿಸುತ್ತಾ ನಮ್ಮ ಮೇಲೆ (ನಮ್ಮ ಅನುಚರರ ಮೇಲೆ) ಕೇಸುಗಳಿಟ್ಟಿದ್ದಾರೆ, ದಾಳಿಮಾಡಿದ್ದಾರೆ. ಮುಸ್ಲಿಮ್‌ರು ಅಂತಹ ಕೆಲಸಗಳನ್ನು ಎಲ್ಲೂ ಮಾಡಲಿಲ್ಲ. ಮೇಲಾಗಿ ತಿಳಿಯದಿರುವಾಗ ನಮ್ಮನ್ನು ವಿರೋಧಿಸಿ ಮಾತನಾಡಿದರೂ, ನಮ್ಮ ಜ್ಞಾನವು ತಿಳಿದ ನಂತರ ನಮ್ಮ ಬಗ್ಗೆ ಗೌರವವನ್ನು ಪ್ರದರ್ಶಿಸಿದ್ದಾರೆ. ಅನ್ಯಮತವಾದ ಮುಸ್ಲಿಮ್‌ರು ನಮ್ಮ ಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ಆಸಕ್ತಿ ತೋರುತ್ತಿರುವಾಗ,

ಈಗಲೂ ಹಿಂದೂ ಸಮಾಜದಲ್ಲಿ ನಾಯಕರೆನ್ನುವವರು ಸ್ವಲ್ಪವಾದರೂ ಜ್ಞಾನವಿಲ್ಲದ ನಮ್ಮನ್ನು ವಿರೋಧಿಸುತ್ತಿದ್ದಾರೆ. ಅನಂತಪುರಂ ಜಿಲ್ಲೆ, ಗುಂತಕಲ್ಲು ಪಟ್ಟಣದಿಂದ ಆರು, ಏಳುಜನ ಮುಸ್ಲಿಮ್ ಯುವಕರು ನಮ್ಮ ಜ್ಞಾನವನ್ನು ತಿಳಿಯುವುದಕ್ಕೆ ಪ್ರತಿ ಪೌರ್ಣಮಿ ಸಮಾವೇಶಕ್ಕೆ ಬರುವುದು ನಡೆಯುತ್ತಿರುವಾಗ, ಅಲ್ಲಿಂದ ಒಬ್ಬ ಹಿಂದೂವು ಸಹ ಬರಲಿಲ್ಲ ನಾವು ಹೇಳುವ ಜ್ಞಾನವೇನು ಎಂದು ತಿಳಿಯುವುದಕ್ಕೆ ಪ್ರಯತ್ನ ಸಹ ಮಾಡಲಿಲ್ಲ. ಅದೇ ಗುಂತಕಲ್ಲು ಪಟ್ಟಣದಲ್ಲಿ ಭಗವದ್ಗೀತೆ ಎಂಬ ಹೆಸರನ್ನು ನೋಡಿಯಾದರೂ ಭಯಪಡದೆ, ನಾವು ಬರೆದಿರುವ "ತ್ರೈತಸಿದ್ಧಾಂತ ಭಗವದ್ಗೀತೆ"ಯನ್ನು ಕ್ರೈಸ್ತರದೆಂದು ಹರಿದುಹಾಕುವುದು, ಸುಟ್ಟುಹಾಕುವುದು ನಡೆದಿದೆ. ಇದೆಲ್ಲಾ ನೋಡಿದರೇ ಕಾಣಿಸುವ ಉಗ್ರವಾದವಿರುವ ಮುಸ್ಲಿಮ್‌ಗಳೇ ಜ್ಞಾನವನ್ನು ತಿಳಿಯುವುದರಲ್ಲಿ ಮುಂದಿದ್ದಾರೆಂದು ತಿಳಿಯುತ್ತಿದೆ. ನಮ್ಮ ಅನುಭವದಲ್ಲಿ ಹಿಂದೂಗಳಲ್ಲಿರುವ ಮತದ್ವೇಷವನ್ನು ಮುಸ್ಮಿಮ್‌ರಲ್ಲಿರುವ ಮತದ್ವೇಷವನ್ನು ನೋಡಿದ್ದೇವೆ. ಇದರಲ್ಲಿ ನಾನು ಹಿಂದೂವಾಗಿದ್ದರೂ ಹಿಂದೂಗಳು ನನ್ನ ಮೇಲೆ ತೋರಿಸಿರುವ ಮತದ್ವೇಷವನ್ನು ಹೇಳಿದ್ದೇನೆ. ಹಿಂದೂಗಳ ಮೇಲೆ ಮುಸ್ಲಿಮ್‌ಗಳಿಗಿರುವುದು ಸಹ ಹೇಳಿದ್ದೇನೆ. ಇನ್ನು ಕ್ರೈಸ್ತರು ಹೇಗೆ ಅವರ ಮತದ್ವೇಷವನ್ನು ತೋರಿ ಸುತ್ತಿದ್ದಾರೋ ಸ್ವಲ್ಪ ನನ್ನ ಅನುಭವದಲ್ಲಿನ ವಿಷಯವನ್ನೇ ಹೇಳಬಲ್ಲೆನು.

**ಪ್ರಶ್ನೆ :– ಹಿಂದೂಗಳು ನಿಮ್ಮಸಲುವಾಗಿ ತೋರಿರುವ ದ್ವೇಷವನ್ನು ಕುರಿತು ಹೇಳಿದ್ದೀರ. ಆದರೇ ಹಿಂದೂಗಳು ಕ್ರೈಸ್ತರ ಬಗ್ಗೆ ಹೇಗಿದ್ದಾರೋ, ಮುಸ್ಲಿಮ್‌ಗಳ ಸಲುವಾಗಿ ಹೇಗಿದ್ದಾರೋ ಹೇಳಬಲ್ಲಿರಾ?**

**ಉತ್ತರ :–** ನಾನು ನೋಡಿರುವುದು ಹೇಳಬಲ್ಲೆನು. ಹಿಂದೂಗಳು ಉಳಿದ ಎರಡು ಮತಗಳ ಬಗ್ಗೆ ಮತದ್ವೇಷ ಹೊಂದಿರುವುದು ನಿಜವೇ ಆದರೂ, ಕ್ರೈಸ್ತರ ಮೇಲೆ ಹೋದಂತೆ ಮುಸ್ಲಿಮ್‌ಗಳ ಮೇಲಕ್ಕೆ ಹೋಗುತ್ತಿಲ್ಲ. ಒಂದುವೇಳೆ ಎಲ್ಲಾದರೂ ಮುಸ್ಲಿಮ್‌ಗಳ ಮೇಲೆ ದಾಳಿಮಾಡಿದರೂ, ಅವರು ಕೂಡಲೇ ಹಿಂದೂಗಳ ಮೇಲೆ ದಾಳಿ ಮಾಡುವುದೋ, ಅಥವಾ ಅದಕ್ಕಿಂತಲೂ ಹೆಚ್ಚಾಗಿ

ಬಾಂಬುಗಳು ಸಿಡಿಸಿ ಹಿಂಸೆಯನ್ನು ಸೃಷ್ಠಿಸುವುದೋ ನಡೆಯುತ್ತಿರುತ್ತದೆ. ಆದ್ದರಿಂದ ಹಿಂದೂಗಳು ಹೆಚ್ಚಾಗಿ ಮುಸ್ಲಿಮ್‌ಗಳ ಸಹವಾಸಕ್ಕೆ ಹೋಗುವುದಿಲ್ಲ. ನಾನು ನೋಡಿರುವುದರಲ್ಲಿ ಕ್ರೈಸ್ತರ ಮೇಲಕ್ಕೇ ಹೆಚ್ಚಾಗಿ ದಾಳಿಮಾಡುವುದು, ಅವರನ್ನು ಭಯಪಡುವಂತೆ ಮಾಡುವುದು, ಅವರ ಪ್ರಾರ್ಥನೆಗಳನ್ನು, ಸಭೆಗಳನ್ನು ಭಂಗ ಮಾಡುವುದು ನಡೆಯುತ್ತಿರುತ್ತದೆ. ಮುಸ್ಲಿಮ್‌ಗಳು ಮದರಸಾಲು (ಸಮಾವೇಷ) ಇಟ್ಟು ಅವರ ಮತಬೋಧನೆಗಳನ್ನು ಬೋಧಿಸುತ್ತಿದ್ದರೂ, ಅವರ ಸಹವಾಸಕ್ಕೆ ಹೋಗದ ಹಿಂದೂಗಳು, ಹೆಚ್ಚಾಗಿ ಕ್ರೈಸ್ತರ ಸಹವಾಸಕ್ಕೆ ಹೋಗುವುದು ನಡೆಯುತ್ತಿದೆ. ಎಲ್ಲಕಡೆ ಹಿಂದೂಗಳದೇ ಮೇಲುಗೈಯಾಗಿ ಕಾಣಿಸುತ್ತಿದೆ. ಕ್ರೈಸ್ತರು ಮುಸ್ಲಿಮ್‌ಗಳಂತೆ ಪ್ರತಿದಾಳಿ ಮಾಡುವುದಿಲ್ಲ. ಮೇಲ್ನೋಟಕ್ಕೆ ನಮ್ಮದು ಶಾಂತಿಮತ ಎಂದು ಹೇಳಿಕೊಳ್ಳುತ್ತಾ ಮೌನವಾಗಿದ್ದರೂ, ಒಳೊಳಗೆ ಅವರ ಬುದ್ಧಿಯನ್ನು ಉಪಯೋಗಿಸಿ ಹಿಂದೂಗಳನ್ನು ಮೋಸವಮಾಡುತ್ತಿರುತ್ತಾರೆ. ಅವರ ಕಾರ್ಯಾಚರಣೆ ಹೊರಗೆ ತಿಳಿದಿಲ್ಲ ಆದರೇ, ಅವರಲ್ಲಿ ಸಹ ಮತದ್ವೇಷವೇನೂ ಕಡಿಮೆ ಇಲ್ಲದಂತಿದೆ. ಮೊದಲು ನನಗೆ ತಿಳಿದ ವಿಷಯವನ್ನು ವಿವರಿಸುತ್ತೇನೆ. ಅದರಲ್ಲಿ ಹಿಂದೂಗಳು ಕ್ರೈಸ್ತರ ಬಗ್ಗೆ ಹೇಗಿದ್ದಾರೋ ತಿಳಿಯಬಲ್ಲದು.

ನಾನು 2006ನೇ ವರ್ಷದಲ್ಲಿ ಕಾಕಿನಾಡ ಎಂಬ ಊರಿಗೆ ಹೋಗಬೇ ಕಾಯಿತು. ಅಲ್ಲಿ ಒಂದು ಲಾಡ್ಜಿನಲ್ಲಿ ಇರುವಾಗ, ನನಗೆ ಪರಿಚಯ ವಿರುವ ವ್ಯಕ್ತಿ ನಾನು ಅಲ್ಲಿರುವ ವಿಷಯ ತಿಳಿದು, ಆತನಿಗೆ ಪರಿಚಯವಿರುವ ಕೆಲವರಿಗೆ ಪ್ರಬೋಧಾನಂದ ಗುರುಗಳು ಬಂದಿದ್ದಾರೆಂದು ಹೇಳುವುದು ನಡೆದಿದೆ. ನಾನು ಎಲ್ಲಿಗೆ ಹೋದರೂ ನನ್ನನ್ನು ಯಾರೂ ಗುರುತಿಸಲಾರರು. ನಾನು ಸರ್ವಸಾಧಾರಣವಾಗಿ ಎಲ್ಲರಿರುವ ವಸ್ತ್ರಗಳಲ್ಲಿ ಇರುವುದರಿಂದ ಪ್ರತ್ಯೇಕವಾದ ವಸ್ತ್ರಗಳು, ಪ್ರತ್ಯೇಕವಾದ ಅಲಂಕಾರ ಇಲ್ಲದಿರುವುದರಿಂದ, ನನ್ನನ್ನು ಜ್ಞಾನ ತಿಳಿದ ಮನುಷ್ಯ ಎಂದುಸಹ ಯಾರು ಅಂದುಕೊಳ್ಳುವುದಿಲ್ಲ. ಆದರೇ ನನ್ನ ಗ್ರಂಥಗಳನ್ನು ಓದಿರುವ ವ್ಯಕ್ತಿ ನನ್ನನ್ನು ಕುರಿತು ನಾನು ಅಲ್ಲಿಗೆ ಹೋದ ವಿಷಯವನ್ನು ಆತನಿಗೆ ಪರಿಚಯವಿರುವ ಹಿಂದೂ ಸಮಾಜದಲ್ಲಿ "ನಾವು

ದೊಡ್ಡ"ವರೆಂದು ಹೇಳಿಕೊಳ್ಳುವ ಅವರೊಂದಿಗೆ ಹೇಳಿದಾಗ! ಅವರು ಸುಮಾರು ಹತ್ತುಜನ ನಮ್ಮಬಳಿಗೆ ಬಂದು ಭೇಟಿಯಾಗುವುದು ನಡೆದಿದೆ. ಆಗ ನಾನು ಏನೂ ಮಾತನಾಡದೆ ಸುಮ್ಮನೆ ಅವರ ಪರಿಚಯವನ್ನು ಕೇಳಿ ಸುಮ್ಮನಿದ್ದೇನೆ. ಮಾತನಾಡುವ ಅವಕಾಶ ಅವರಿಗೇ ಕೊಟ್ಟೆನು. ಅವರು ಹಿಂದೂತ್ವವನ್ನು ನಾವು ಕಾಪಾಡುತ್ತಿದ್ದೇವೆ, ಇಲ್ಲದೇ ಹೋದರೇ ಇಲ್ಲಿ ಹೆಚ್ಚಾಗಿ ಹಿಂದೂಗಳೆಲ್ಲರೂ ಕ್ರೈಸ್ತರಾಗಿ ಬದಲಾಗುತ್ತಿದ್ದರೆಂದು ಹೇಳಲು ಮೊದಲುಮಾಡಿದ್ದಾರೆ. ಅವರು ಹೇಳುವ ಮಾತುಗಳಿಗೆ ಮಧ್ಯದಲ್ಲಿ ಆಗಾಗ ನಾನು ಸಹ ಮಾತನಾಡಬೇಕಾದ ಕೆಲಸ ಏರ್ಪಟ್ಟಿದೆ. ಮಾತನಾಡದೆ ಹೋದರೇ ನಾವು ಹೇಳುವ ವಿಷಯದ ಮೇಲೆ ಈತನಿಗೆ ಆಸಕ್ತಿ ಇಲ್ಲವೆಂದು ಅಂದುಕೊಳ್ಳಬಲ್ಲರು. ಆದ್ದರಿಂದ ಆಗಾಗ ಕೆಲವು ವಿಷಯಗಳನ್ನು ಕೇಳಬೇಕಾಗಿ ಬಂದಿದೆ. ಅವರ ಸಂಭಾಷಣೆ ಕೆಳಗಿನ ವಿಧವಾಗಿ ಸಾಗಿದೆ ನೋಡಿರಿ.

**ಒಂದು ವ್ಯಕ್ತಿ :–** ಇಲ್ಲಿ ಕಾಕಿನಾಡದಲ್ಲಿ ಹಿಂದೂ ಸಮಾಜದಲ್ಲಿ ನಾನು ಪಟ್ಟಣ ನಾಯಕನು. ಇಲ್ಲಿ ಕ್ರೈಸ್ತರು ಬಹಳಜನ ಹಿಂದೂಗಳನ್ನು ಅವರ ಮತದೊಳಗೆ ಬದಲಾಯಿಸಿಕೊಂಡಿದ್ದಾರೆ. ಅದಕ್ಕೆ ಅಡ್ಡಗೋಡೆಕಟ್ಟುವುದಕ್ಕೆ ಕ್ರೈಸ್ತರು ಎಲ್ಲಿ ಬೋಧನೆಗಳು ಹೇಳುತ್ತಿದ್ದರೂ, ಅವರು ಎಲ್ಲಿ ಸ್ವಸ್ಥತ ಸಭೆಗಳು ಮಾಡುತ್ತಿದ್ದರೂ, ಅವರಮೇಲೆ ಹಲ್ಲೆನಡೆಸಿ ಅವರನ್ನು ಅಲ್ಲಿಂದ ಹೊಡೆದೋಡಿಸುವ ಕೆಲಸವನ್ನು ಕಳೆದ ಮೂರು ವರ್ಷಗಳಿಂದ ಮಾಡುತ್ತಿದ್ದೇವೆ. ನಾವು ಒಂದು ಸಂಘವಾಗಿ ಏರ್ಪಟ್ಟು ಇನ್ನೂ ಕೆಲವರನ್ನು ತಯಾರಿಮಾಡಿ ಕ್ರೈಸ್ತರ ಫಾದರ್‌ಗಳಮೇಲೆ, ಪಾಸ್ಟರ್‌ಗಳ ಮೇಲೆ ದಾಳಿಮಾಡುವುದರಿಂದ, ಅವರ ಸಭೆಗಳು ಸಮಾವೇಶಗಳು ಇಲ್ಲದಂತೆ ಮಾಡುವುದರಿಂದ, ಅವರ ಪ್ರಚಾರ ಕಡಿಮೆಯಾಗಿಹೋಗಿದೆ. ಈಗ ಹಿಂದೂಗಳು ಕ್ರೈಸ್ತರಾಗಿ ಬದಲಾಗಿಹೋಗುವುದು ಸಹ ಕಡಿಮೆಯಾಗಿಹೋಗಿದೆ. ನಾವು ಈ ಕಾರ್ಯಗಳು ಮಾಡದೆ ಹೋದರೇ ಹಿಂದೂಮತಕ್ಕೆ ದೊಡ್ಡ ನಷ್ಟ ಏರ್ಪಡುತ್ತಿತ್ತು.

**ನಾನು :–** ದಾಳಿ ಮಾಡುವುದರಿಂದ ಮತಪ್ರಚಾರ ಮೇಲ್ನೋಟಕ್ಕೆ ಕಾಣಿಸದೆ

ಹೋಗಬಹುದು. ಅವರಲ್ಲಿ ಉದ್ದೇಶಕ್ಕೆ ಇನ್ನೂ ಬಲಸೇರಿ ನಿಮಗೆ ತಿಳಿಯದಂತೆ ಮತಬದಲಾವಣೆಗಳು ಮಾಡಬಲ್ಲರು ಅಲ್ಲವೇ!

**ಎರಡನೆಯ ವ್ಯಕ್ತಿ :–** ಹಾಗೆ ನಡೆಯಬಾರದೆಂದೇ ಫಾದರ್‌ಗಳನ್ನು, ಪಾಸ್ಟರ್‌ಗಳನ್ನು ಹೆಚ್ಚಾಗಿ ಭಯವಿಟ್ಟಿದ್ದೇವೆ. ಕೆಲವುಕಡೆ ನಿರ್ಭಂಧಿಸಿ ನಿಮ್ಮ ಕ್ರೈಸ್ತವ ಮತಕ್ಕಿಂತಲೂ ನಮ್ಮ ಹಿಂದೂ ಮತವು ದೊಡ್ಡದೆಂದು ಹೇಳಿದ್ದೇವೆ. ಎಲ್ಲೂ ಮತಪ್ರಚಾರ ಮಾಡುವುದಿಲ್ಲವೆಂದು ಪ್ರಮಾಣ ಮಾಡಿಸಿಕೊಂಡು ಬಿಟ್ಟುಹಾಕಿದ್ದೇವೆ. ಇಲ್ಲಿ ರೇವು ಇರುವುದರಿಂದ ವಿದೇಶೀ ಪ್ರಚಾರಕರು ಸಹ ಬಂದು, ಇಷ್ಟಬಂದಹಾಗೆ ಹಣ ಕೊಟ್ಟು ಮತಬದಲಾವಣೆ ಮಾಡುವುದು ನಡೆಯುತ್ತಿದೆ. ಆದ್ದರಿಂದ ಯಾರಾದರೂ ವಿದೇಶೀ ಬೋಧಕರು ಬಂದರೂ, ಅವರನ್ನು ಇಲ್ಲಿ ಇರಿಸದೆ ಓಡಿಸುತ್ತಿದ್ದೇವೆ. ನಾವು ನಮ್ಮ ಕೆಲಸಗಳನ್ನು ಬಿಟ್ಟು ಅದೇ ಕೆಲಸವಾಗಿ ತಿರುಗುತ್ತಿರುವುದರಿಂದ ನಮ್ಮ ಪ್ರಾಂತದಲ್ಲಿ ಮತಬದಲಾವಣೆಗಳು ಕಡಿಮೆಯಾಗಿದೆ.

**ಮೂರನೆಯ ವ್ಯಕ್ತಿ :–** ನಾನು, ಕೆಲವರು ಸೇರಿ ಒಂದು ಪಾಸ್ಟರ್‌ನನ್ನು ಮೂರು ದಿನಗಳು ಕಾಲು, ಕೈ ಕಟ್ಟಿಹಾಕಿ ಬಂಧಿಸಿಟ್ಟು ಮೂರುದಿನಗಳ ನಂತರ ಎಂದಿಗೂ ಕ್ರೈಸ್ತವ ಪ್ರಚಾರ ಮಾಡುವುದಿಲ್ಲವೆಂದು ಒಪ್ಪಿಸಿಕೊಂಡು ಕಳಿಸಿದ್ದೇವೆ.

**ನಾನು :–** ನೀವು ಮಾಡಿರುವುದು ನಿಮ್ಮವರೆಗು ದೊಡ್ಡದೇ! ಅದು ನಾಗರಿಕ ಸಮಾಜದಲ್ಲಿ ದೊಡ್ಡದಲ್ಲ. ಬಂಧಿಸುವುದರಿಂದ, ಹಿಂಸಿಸುವುದರಿಂದ ಯಾರೂ ಯಾರನ್ನು ಬದಲಾಯಿಸಲಾರರು. ನೀವು ಮೂರು ದಿನಗಳು ಬಂಧಿಸಿ ಬಿಟ್ಟಿರುವ ಪಾಸ್ಟರ್ ಪುನಃ ಪ್ರಚಾರ ಮಾಡುವುದಿಲ್ಲವೆಂದು ನೀವು ಹೇಗೆ ನಂಬುತ್ತಿದ್ದೀರ?

**ಮೂರನೆಯ ವ್ಯಕ್ತಿ :–** ಹೌದು! ನೀವು ಹೇಳುವ ಮಾತು ನಿಜವೇ ಆಗಿದೆ. ಅದೇ ಪಾಸ್ಟರ್ ಮತ್ತೊಂದು ಕಡೆ ಪ್ರಚಾರ ಮಾಡುತ್ತಾ ಕಾಣಿಸಿದನು. ನಾವು ಮೂರುದಿನಗಳು ಬಂಧಿಸಿ ಹೇಳಿದರೂ, ಪುನಃ ಆತನು ತನ್ನ ಕೆಲಸವನ್ನು ತಾನು ಮಾಡುತ್ತಿದ್ದಾನೆ.

**ನಾನು :–** ಹಿಂದೂಗಳು ಕ್ರೈಸ್ತವರಾಗಿ ಬದಲಾಗಿಹೋಗುತ್ತಿದ್ದಾರೆಂದು, ಇದೆಲ್ಲವೂ ಕ್ರೈಸ್ತವ ಪ್ರಚಾರಕರಿಂದಲೇ ನಡೆಯುತ್ತಿದೆ ಎಂದು ನೀವು ಹೇಳುತ್ತಿದ್ದೀರ. ಹಿಂದೂ ಮತವು ಕಡಿಮೆಯಾಗದೇ ಇರುವುದಕ್ಕೆ, ಮತಬದಲಾವಣೆ ನಡೆಯದೆ ಇರುವುದಕ್ಕೆ, ಅವರು ಮಾಡಿದಂತೆ ನೀವು ಸಹ ಹಿಂದೂ ಮತವನ್ನು ಕುರಿತು ಪ್ರಚಾರ ಮಾಡಬಹುದು ಅಲ್ಲವೇ! ಹಿಂದೂಮತವನ್ನು ಕುರಿತು ಯಾವ ಪ್ರಚಾರ ಮಾಡದೇ, ಕ್ರೈಸ್ತರ ಮೇಲೆ ದಾಳಿಮಾಡಿ ಮತಬದಲಾವಣೆಗಳು ನಿಲ್ಲಿಸಬೇಕೆಂದರೇ, ಅಂಗೈ ಅಡ್ಡವಿಟ್ಟು ಸೂರ್ಯನನ್ನು ಹಿಡಿದುಕೊಂಡಿದ್ದೇನೆನ್ನುವಂತಿರುತ್ತದೆ. ಅಂಗೈಯಲ್ಲಿ ಸೂರ್ಯನನ್ನು ಹೇಗೆ ಹಿಡಿಯಲಾರೆವೋ! ಹಾಗೆಯೇ ದಾಳಿಯಿಂದ ಮತಪ್ರಚಾರವನ್ನು ತಡೆಯಲಾರೆವು. ಅವರ ಮತವನ್ನು ಕುರಿತು ಅವರು ಪ್ರಚಾರ ಮಾಡಿದಂತೆ, ನಿಮ್ಮ ಮತವನ್ನು ಕುರಿತು ನೀವು ಪ್ರಚಾರ ಮಾಡಬಹುದಲ್ಲವೇ! ಕ್ರೈಸ್ತರಾಗಿ ಬದಲಾದ ಹಿಂದೂಗಳನ್ನು ನಾನು ಮಾತನಾಡಿಸಿ, ನೀವು ಕ್ರೈಸ್ತರಾಗಿ ಏಕೆ ಬದಲಾಗಿದ್ದೀರ? ಎಂದು ಕೇಳಿದರೇ ಅದಕ್ಕೆ ಅವರು “ನಮಗೆ ಹಿಂದೂ ಮತದಲ್ಲಿ ದೇವರು ಯಾರೋ ತಿಳಿದಿಲ್ಲ. ಅಷ್ಟೇಅಲ್ಲದೆ ಹಿಂದೂಗಳ ಜ್ಞಾನವು ಯಾವುದೋ ತಿಳಿದಿಲ್ಲ, ಹಿಂದೂಗಳ ಗ್ರಂಥವು ಇಂಥದ್ದೆಂದು ಸಹ ತಿಳಿದಿಲ್ಲ. ಕೆಲವರು ವೇದಗಳು ಎನ್ನುತ್ತಾರೆ, ಕೆಲವರು ಪುರಾಣಗಳು ಎನ್ನುತ್ತಾರೆ. ಕೆಲವರು ಭಗವದ್ಗೀತೆ ಎನ್ನುತ್ತಿದ್ದಾರೆ. ಯಾವುದನ್ನು ನಂಬಬೇಕೋ ತಿಳಿಯಲಿಲ್ಲ. ದೇವರ ವಿಷಯದಲ್ಲಿ ಕೆಲವರು ರಾಮನೆಂದರೆ, ಕೆಲವರು ರಂಗನೆನ್ನುತ್ತಾರೆ, ಕೆಲವರು ಆದಿಶಕ್ತಿಕಾಳಿಕಾದೇವಿ ಎನ್ನುತ್ತಾರೆ. ಯಾವುದನ್ನು ಸರಿಯಾಗಿ ಹೇಳುವವರು ಇಲ್ಲ. ಮೇಲಾಗಿ ಹಿಂದೂಗಳಲ್ಲಿ ದೊಡ್ಡ, ಚಿಕ್ಕ ಕುಲಗಳೆಂದು ನಮ್ಮಂಥವರನ್ನು ಅವಮಾನ ಗೊಳಿಸುತ್ತಿದ್ದಾರೆ. ಬ್ರಾಹ್ಮಣರು ಹೊರತು ಉಳಿದವರೆಲ್ಲರೂ ಅಂಟಬಾರದವರೆನ್ನುವುದರಿಂದ, ಅಂತಹ ಗುಣತೀವ್ರತೆಇರುವ ಮತದಿಂದ ಹೊರಬಿದ್ದು ಎಂತಹ ವ್ಯತ್ಯಾಸ ತೋರದ ಮತ, ಒಬ್ಬನೇ ದೇವರು, ಒಂದೇ ಗ್ರಂಥವಿರುವ ಮತವನ್ನು ಆಯ್ಕೆಮಾಡಿಕೊಂಡು ಇದರೊಳಗೆ ಬಂದಿದ್ದೇವೆ” ಎನ್ನುತ್ತಿದ್ದಾರೆ.

ನೀವು ದಾಳಿಮಾಡುವ ಬದುಲು ಅವರಿಗೆ ತಿಳಿಯದ ಜ್ಞಾನವನ್ನು ಹೇಳಿದ್ದರೇ ಅವರು ಬೇರೇ ಮತದೊಳಗೆ ಹೋಗುವವರಲ್ಲ ಅಲ್ಲವೇ!

**ನಾಲ್ಕನೆಯ ವ್ಯಕ್ತಿ :–** ಜ್ಞಾನ ಪ್ರಚಾರ ನಿಮ್ಮಂತಹ ಸ್ವಾಮೀಜಿಗಳು ಮಾಡಬೇಕು.

**ನಾನು :–** ನಾವು ಕೈಲಾದಷ್ಟು ಮಾಡುತ್ತಿದ್ದೇವೆ. ಆದರೇ ಸ್ವಲ್ಪವಾದರೂ ಜ್ಞಾನ ತಿಳಿಯದ ಕೆಲವು ಹಿಂದೂ ಸಂಘಗಳು ನಾನು ಹೇಳುವುದು ಜ್ಞಾನವೇ ಅಲ್ಲವೆನ್ನುತ್ತಿದ್ದಾರೆ. ನಮ್ಮನ್ನು ಮತಜ್ಞಾನವನ್ನೇ ಹೇಳಬೇಕೆಂದು, ಇಂತಹ ದೇವರ ಜ್ಞಾನವೇ ಹೇಳಬೇಕೆಂದು ನಿಯಮಗಳನ್ನು ಹೇಳುತ್ತಿದ್ದಾರೆ. ನಾವು ಹಾಗೆ ಹೇಳುವುದು ಅಜ್ಞಾನವಾಗುತ್ತದೆ. ಮತಜ್ಞಾನದಿಂದ ನಿನ್ನ ಮತ, ನನ್ನ ಮತ ಎಂಬ ದ್ವೇಷಭಾವನೆಬಂದು ಅಸೂಯೆಯಿಂದ ಒಬ್ಬರಿಗೊಬ್ಬರು ಘರ್ಷಣೆಪಡುವ ಪರಿಸ್ಥಿತಿ ಏರ್ಪಡುತ್ತದೆ. ಹಾಗಾಗದೆ ಇರುವುದಕ್ಕೆ ನಮ್ಮಂಥವರು ಆತ್ಮ ಜ್ಞಾನವನ್ನೇ ಹೇಳಿ, ಮತವೆಂಬ ಜ್ಞಾಪಕವಿಲ್ಲದಂತೆ ಮಾಡಿದರೆ, ಆಗ ಮತವನ್ನು ಯಾರೂ ಮುಖ್ಯವಾಗಿ ಇಟ್ಟುಕೊಳ್ಳುವುದಿಲ್ಲ. ಮತಗಳನ್ನು ಬದಲಾಯಿಸುವುದಿಲ್ಲ. ಅವರ ದೃಷ್ಠಿ ಜ್ಞಾನದ ಮೇಲೆಯೇ ಇರುತ್ತದೆ.

**ಮೊದಲ ವ್ಯಕ್ತಿ :– ನೀವು ಹೇಳುವುದು ಬಾಯಾರಿಕೆಯಾದಾಗ ಬಾವಿ ತೋಡಬೇಕೆನ್ನುವಂತಿದೆ. ಈಗ** ಮತಬದಲಾವಣೆಗಳು ನಡೆದುಹೋಗುತ್ತಿದ್ದರೇ, ಅವುಗಳನ್ನು ತಡೆಯದೇ ಜ್ಞಾನ ಹೇಳುತ್ತಾ ಹೋದರೇ, ಅದು ಪ್ರಜೆಗಳಿಗೆ ತಿಳಿಯಬೇಕೆಂದರೇ ಬಹಳಕಾಲ ಬೇಕಾಗುವುದು. ಅಷ್ಟರಲ್ಲಿ ನಡೆಯಬೇಕಾಗಿರುವುದು ನಡೆದುಹೋಗಿ, ಹಿಂದೂಗಳೆಲ್ಲರೂ ಕ್ರೈಸ್ತರಾಗಿ ಬದಲಾಗಿ ಹೋಗಬಲ್ಲರು. ಅದೆಲ್ಲಾ ಆಗುವಕೆಲಸವಲ್ಲ. ಕ್ರೈಸ್ತರ ಮೇಲೆ ದಾಳಿಮಾಡಿ ಅವರ ಮತಪ್ರಚಾರವನ್ನು ತಡೆಯಬೇಕಾಗಿದೇ. ಹಾಗಾಗದೇ ಹೋದರೇ ಹಿಂದೂಮತವು ಪೂರ್ತಿ ಬದಲಾಗಿ ಏನೂ ಇಲ್ಲದೇ ಹೋಗುವುದು.

**ನಾನು :–** ನೀವು ಇಷ್ಟುಜನ ಇಷ್ಟು ಸಂಘಗಳಾಗಿ ಏರ್ಪಟ್ಟು ದಾಳಿಮಾಡಿ ನಿಲ್ಲಿಸಬೇಕೆಂದು ಕೆಲವರು, ಇನ್ನುಕೆಲವರು ಭಯವಿಟ್ಟು ಮತಬದಲಾವಣೆ

ನಡೆಯಬಾರದೆಂದು ಹೇಳುವವರು ಕೆಲವರು, ಎಷ್ಟೋಜನ ಎಷ್ಟೋವಿಧಗಳಲ್ಲಿ ಪ್ರಯತ್ನಗಳು ಮಾಡುತ್ತಿದ್ದರೂ ಎಲ್ಲಾದರೂ ಮತಬದಲಾವಣೆ ನಿಂತಿದೆಯಾ? ನಿಂತಿಲ್ಲ, ಚಾಪೆಕೆಳಗೆ ನೀರಿನಂತೆ ಮತಬದಲಾವಣೆ ನಡೆಯುತ್ತಲೇ ಇದೆ. ತೆಲಂಗಾಣ, ರಾಯಲಸೀಮ ಪ್ರದೇಶದಲ್ಲಿ ಅಷ್ಟುವೇಗವಾಗಿ ಮತಬದಲಾವಣೆ ನಡೆಯುತ್ತಿದ್ದರೂ, ಉತ್ತರಾಂಧ್ರ ಪ್ರದೇಶವೆಲ್ಲವೂ ನೂರಕ್ಕೆ ಸುಮಾರು ಶೇಕಡ 70 ರಷ್ಟು ಜನ ಕ್ರೈಸ್ತರಾಗಿ ಬದಲಾಗಿಹೋಗಿದ್ದಾರೆ. ಯಾರನ್ನು ಕದಲಿಸಿ ನೋಡಿದರೂ ಅವರು ಹಿಂದೂಗಳಿಂದ ಕ್ರೈಸ್ತರಾಗಿ ಬದಲಾದಂತೆ ತಿಳಿಯುತ್ತಿದೆ. ನೀವು ಇಷ್ಟುಕಾಲದಿಂದ ಇಷ್ಟು ಸಂಘಗಳ ಹೆಸರುಗಳಿಂದ ಇದ್ದು ಅಲ್ಲಿ ಏಕೆ ತಡೆಯಲಾರದೆ ಹೋಗಿದ್ದೀರ? ಅದಕ್ಕೆ ಒಂದೇ ಕಾರಣವಿದೆ. ಅವರು ಅವರ ಗ್ರಂಥವನ್ನು ಪ್ರಚಾರ ಮಾಡುತ್ತಿದ್ದಾರೆ. ಕ್ರೈಸ್ತರಾಗಿ ಬದಲಾದವರು ಪ್ರತಿಯೊಬ್ಬರೂ ಅವರ ಗ್ರಂಥವಾದ ಬೈಬಲನ್ನು ಓದುತ್ತಿದ್ದಾರೆ. ಅದು ಹಿಂದೂಗಳಲ್ಲಿ ನಡೆಯುತ್ತಿಲ್ಲ. ಈದಿನ ಹಿಂದೂ ಸಮಾಜದಲ್ಲಿ ನಮ್ಮದು ಒಂದು ಸಂಘವೆಂದು ಹೆಸರಿಟ್ಟುಕೊಂಡವರು ಇತರ ಮತಗಳ ಮೇಲೆ ದಾಳಿ ಮಾಡಬೇಕೆಂಬ ಚಿಂತೆ ಹೊರತು, ಜ್ಞಾನಹೇಳಿ ಬದಲಾಯಿಸೋಣವೆಂಬ ಚಿಂತೆಯಿಲ್ಲ. ವಾಸ್ತವ ಹೇಳಬೇಕೆಂದರೇ ಹಿಂದೂ ಸಮಾಜ ಸಂಘಗಳಲ್ಲಿ ಕೆಲಸಮಾಡುತ್ತಿದ್ದೇವೆಂದು ಹೇಳುತ್ತಿರುವ ಕಾರ್ಯಕರ್ತರಿಗಾಗಲೀ, ಆ ಸಮಾಜಕ್ಕೆ ಹಿರಿಯರಾದವರಿ ಗಾಗಲೀ, ಹಿಂದೂ ಧರ್ಮಗಳು ಯಾವುವೋ ತಿಳಿದಿಲ್ಲ. ಹಿಂದೂ ಜ್ಞಾನವೇನೋ ತಿಳಿದಿಲ್ಲ. ಹಿಂದೂ ಧರ್ಮಗಳು ತಿಳಿಯದವರು ನಾವು ಹಿಂದೂ ಪರಿಷತ್‌ನಲ್ಲಿ ಕೆಲಸಮಾಡುತ್ತಿದ್ದೇವೆಂದು, ನಾವು ಹಿಂದೂ ಸಂಘದಲ್ಲಿ ಕೆಲಸ ಮಾಡುತ್ತಿದ್ದೇ ವೆಂದು ಹೇಳುವುದು ಹೊರತು, ಅವರಿಂದ ಹಿಂದೂಜ್ಞಾನ ಪ್ರಚಾರ ನಡೆಯುವುದಿಲ್ಲ. ದಾಳಿಗಳಿಂದ ಕ್ರೈಸ್ತರ ಬಗ್ಗೆ ಪ್ರಜೆಗಳಿಗೆ ಸಹಾನುಭೂತಿ ಏರ್ಪಟ್ಟು, ಹಿಂದೂಗಳಿಂದ ಕ್ರೈಸ್ತರೊಳಗೆ ಸುಲಭವಾಗಿ ಹೋಗುತ್ತಿದ್ದಾರೆ. ಮತಬದಲಾವಣೆಗೆ ತಡೆಗೋಡೆ ಹಾಕಬೇಕೆಂದರೇ ಹಿಂದೂಗಳೆಂದು ಹೇಳಿಕೊಳ್ಳುವವರಿಗೆ ಮೊದಲು ಹಿಂದೂ ಜ್ಞಾನ, ಹಿಂದೂ ಧರ್ಮ ತಿಳಿದಿರಬೇಕು. ಆಗ ಹಿಂದೂ ಜ್ಞಾನ ಪ್ರಚಾರದಿಂದ ಹಿಂದೂಮತವನ್ನು ಕಾಪಾಡಬಹುದು.

ಈ ವಿಧವಾಗಿ ನಾವು ಹೇಳುವುದರಿಂದ ನಮ್ಮ ಮಾತುಗಳು ಅಲ್ಲಿ ಬಂದವರಿಗೆ ಇಷ್ಟವಾಗಲಿಲ್ಲ. ನಾವು ಜ್ಞಾನವೆಂದರೇ, ಅವರು ದಾಳಿಯೆನ್ನುತ್ತಾರೆ. ಅಂಥವರೊಂದಿಗೆ ಮಾತನಾಡುವುದು ನಮಗೇ ಒಳ್ಳೆಯದಲ್ಲವೆಂದು ಅನಿಸಿದೆ. ಒಳ್ಳೆಯ ಮಾತುಗಳು ಹೇಳಿರುವುದಕ್ಕೆ ನಾವು ಸಹ ಅವರ ದೃಷ್ಠಿಯಲ್ಲಿ ಅನ್ಯಮತದವರಾಗಿ ಅವರಿಗೆ ಕಾಣಿಸಿದ್ದೇವೆ. ನಾನು ಹೇಳುವುದು ಒಳ್ಳೆಯದಾ ಕೆಟ್ಟದಾ ಎನ್ನುವುದು ಮನುಷ್ಯರಿಗೆ ತಿಳಿಯದಿದ್ದರೂ, ದೇವರಿಗಾದರೂ ತಿಳಿದಿರುತ್ತದೆ ಅಲ್ಲವೇ! ದೇವರ ದೃಷ್ಠಿಯಲ್ಲಿ ಒಳ್ಳೆಯದಾಗಿ ಇರುವುದೇ ನಮ್ಮ ಉದ್ದೇಶ. ಹೀಗೆ ಅನೇಕಪ್ರಾಂತಗಳಲ್ಲಿನ ಹಿಂದೂಗಳು ಅನೇಕ ವಿಧವಾಗಿ ಇದ್ದಾರೆ. ಆದರೇ ಭಗವದ್ಗೀತೆಯಲ್ಲಿ ಹೇಳಿರುವ ಜ್ಞಾನವನ್ನು ತಿಳಿದು, ಹಿಂದೂ ಧರ್ಮಗಳನ್ನು ತಿಳಿದಿರುವವರು ಅಪರೂಪವಾಗಿದ್ದಾರೆ. ಉಳಿದ ಮತದವರು ಅವರ ಗ್ರಂಥದಲ್ಲಿನ ವಿಷಯಗಳನ್ನು ಹೇಳಿ ಪ್ರಜೆಗಳನ್ನು ಆಕರ್ಷಿಸುತ್ತಿರುವಾಗ, ಹಿಂದೂಗಳು ಮಾತ್ರ ಆ ಕೆಲಸವನ್ನು ಮಾಡುತ್ತಿಲ್ಲ. ಆ ಕೆಲಸವನ್ನು ಸ್ವಾಮೀಜಿಗಳು ಮಾಡಬೇಕೆಂದು ಹೇಳುತ್ತಾ, ಒಂದುಕಡೆ ಅವರಿಗೆ ಇಷ್ಟವಾದ ಬೋಧನೆಯನ್ನೇ ಹೇಳಬೇಕೆಂದು, ಅವರಿಗೆ ಇಷ್ಟವಾದ ದೇವರನ್ನು ಕುರಿತೇ ಹೇಳಬೇಕೆಂಬ ನಿಯಮವನ್ನು ಗುರುಗಳ ಮೇಲೆ ಸಹ ಇಡುತ್ತಿದ್ದಾರೆ. ಹಾಗೆ ಹೇಳುವುದರಿಂದ ಅದು ಮತಜ್ಞಾನವಾಗುತ್ತದೆ ಹೊರತು ದೈವಜ್ಞಾನವಲ್ಲ. ಮತಜ್ಞಾನದಿಂದ ಮತದ್ವೇಷಗಳೇ ಬರುತ್ತವೆ ಆದರೇ, ಮನುಷ್ಯನಲ್ಲಿ ಜ್ಞಾನ ಬರುವುದಿಲ್ಲ.

ಇನ್ನು ಕ್ರೈಸ್ತವರೆಲ್ಲರಲ್ಲೂ ಜ್ಞಾನವೇ ಇದೆಯಾ, ಪರಮತದ್ವೇಷ ಇಲ್ಲವಾ? ಎಂದು ಪ್ರಶ್ನಿಸಿ ನೋಡಿದರೇ ಎಲ್ಲ ಮತಗಳಲ್ಲಿದ್ದಹಾಗೆಯೇ ಕ್ರೈಸ್ತವ ಮತದಲ್ಲಿ ಸಹ ಪರಮತದ್ವೇಷವು ನೂರಕ್ಕೆ ನೂರರಷ್ಟು ಇದೆ. ಯಾವಾಗ ಪರಮತದ್ವೇಷ ವಿರುತ್ತದೋ, ಆಗ ಅವರಲ್ಲಿ ಹಿಂಸೆಯಿಂದ ಕೂಡಿಕೊಂಡಿರುವ ಉಗ್ರವಾದವು ಸಹ ಇರುತ್ತದೆ. ಆದರೇ ಅವರಲ್ಲಿನ ಉಗ್ರವಾದವು ಹೊರಗೆ ಕಾಣಿಸದೆ ಒಂದು ಯೋಜನೆಯ ಪ್ರಕಾರ ನಡೆಯುತ್ತದೆ. ನಾವು ಅನುಭವಿಸಿದ್ದೇವೆ ಆದ್ದರಿಂದ ಅವರ ಉಗ್ರವಾದವು ಹೀಗೆ ಇದೆಯೆಂದು ನಮ್ಮ ಅನುಭವದಿಂದ ತಿಳಿದಿದೆ.

**ಪ್ರಶ್ನೆ:– ಕ್ರೈಸ್ತವ ಮತ ಶಾಂತಿಮತವಾಗಿ ಹೆಸರುವಾಸಿಯಾಗಿದೆ. ಒಂದು ಕೆನ್ನೆಯ ಮೇಲೆ ಹೊಡೆದರೇ ಮತ್ತೊಂದು ಕೆನ್ನೆ ತೋರಿಸಿರೆನ್ನುವುದು ಯೇಸುಪ್ರಭುವಿನ ಬೋಧನೆ. ಅಂತಹ ಕ್ರೈಸ್ತರು ಶಾಂತ ಸ್ವಭಾವಿಗಳಾಗಿರುವಹಾಗೆ, ಎಲ್ಲೂ ಘರ್ಷಣೆದೋರಣೆ ಇಲ್ಲದಂತೆ ಹೇಳುತ್ತಿರುತ್ತಾರೆ. ಅಂಥವರನ್ನು ಸಹ ನೀವು ಉಗ್ರವಾದಿಗಳ ಪಟ್ಟಿಯಲ್ಲಿ ಸೇರಿಸುವುದು ಒಳ್ಳೆಯದಾ! ಎಂದು ಕೇಳುತ್ತಿದ್ದೇವೆ.**

**ನಾನು :–** ನಾವು ಇರುವ ಸತ್ಯವನ್ನು ಹೇಳುತ್ತಿದ್ದೇವೆ. ಹೊರಗೆ ಎಲ್ಲೂ ಅಸೂಯೆ ಕಾಣಿಸದೆ, ಅವರ ಕೆಲಸವನ್ನು ಅವರು ಮಾಡಿಕೊಂಡುಹೋದಹಾಗೆ ಕಾಣಿಸಿದರೂ, ಎಲ್ಲರಲ್ಲೂ ಅಲ್ಲದೇ ಸ್ವಲ್ಪಜನರಲ್ಲಿ ಪರಮತ ದ್ವೇಷ, ಹಿಂಸಾವಾದನೆ ಇದೆಯೆಂದು ಹೇಳುತ್ತಿದ್ದೇವೆ. ಕೆಲವು ಪ್ರತ್ಯಕ್ಷ ಅನುಭವಗಳನ್ನು ಅನುಸರಿಸಿ ಕ್ರೈಸ್ತರಲ್ಲಿ ಸಹ ಅಸೂಯೆ ಇದೆಯೆಂದು, ಅವರು ಸಹ ಒಂದು ವಿಧವಾಗಿ ಇತರರನ್ನು ಬಾಧಿಸುವ ಉಗ್ರವಾದನೆಯನ್ನು ಹೊಂದಿದ್ದಾರೆಂದು ಹೇಳಬಹುದು. ಒಂದುಸಮಯದಲ್ಲಿ ಒಬ್ಬ ಕ್ರೈಸ್ತವ ಮತಪ್ರಚಾರಕನು, ದೊಡ್ಡ ಬೋಧಕನು, ವಾಕ್‌ಚಾತುರ್ಯವಿರುವ ವ್ಯಕ್ತಿ ಹೈದರಾಬಾದ್ ನಗರದಲ್ಲಿ ಬಹುಶಾ 2004ನೇ ವರ್ಷ ಎರಡು ದಿನಗಳು ಪ್ರಚಾರ ಸಭೆಗಳು ನಡೆಸಿ ಅದರಲ್ಲಿ "ಸೃಷ್ಠಿ ಕರ್ತ ಕೋಡ್ 666" ಎಂದು ಹೇಳುವುದೇ ಅಲ್ಲದೇ, ಅದೇ ಮಾತನ್ನೇ ಹೈದರಾಬಾದ್ ನಗರವೆಲ್ಲಾ ಪ್ರತಿ ಗೋಡೆಮೇಲೆ ಬರೆಯುವುದು ನಡೆದಿದೆ. ಈ ದಿನ ನಾವು ಹಿಂದೂಗಳು, ಹಿಂದೂ ಸಂಘದವರು ಎಂದು ಹೇಳಿಕೊಳ್ಳುವ ಯಾವ ಹಿಂದೂ ಅದನ್ನು ತಲೆಕೆಡಿಸಿಕೊಳ್ಳಲಿಲ್ಲ. ಆ ಮಾತನ್ನು ನೋಡೀನೋಡದಂತೆ ಸುಮ್ಮನಿದ್ದರು. ಹೈದರಾಬಾದ್‌ನಲ್ಲಿ ಎಲ್ಲಾ ಗೋಡೆಗಳ ಮೇಲೆ ಬರೆದರೂ ಇದೇನು? ಎಂದು ಆಲೋಚಿಸುವವರು ಆ ದಿನವಿಲ್ಲ. ಈ ದಿನ ನಾವು ಹಿಂದೂಗಳು, ಹಿಂದೂ ಮತವನ್ನು ರಕ್ಷಿಸುತ್ತಿದ್ದೇವೆ ಎನ್ನುವವರೆಲ್ಲಾ ಆದಿನ ಆಕಳಿಸಿ ನಿದ್ರೆಹೋದಂತಿದ್ದು ಹೋಗಿದ್ದಾರೆ. ಆ ದಿನ ಹೈದರಾಬಾದ್ ಗೋಡೆಗಳಮೇಲೆ ಬರೆದಿರುವುದಕ್ಕೆ ಸ್ಪಂದಿಸಿ, ಸೃಷ್ಠಿಕರ್ತ ಎಲ್ಲರಿಗೂ ಸಂಬಂಧಿಸಿದ ದೇವರೆಂದು ತಿಳಿದು, ಎಲ್ಲರನ್ನೂ ಸೃಷ್ಠಿಸಿದ ಪರಮಾತ್ಮನೆಂದು ತಿಳಿದು, ಆ ದಿನ ಅವರು ಬರೆದಿರುವುದು ಅವರ

ಬೈಬಲ್ ಪ್ರಕಾರ ಸಹ ತಪ್ಪೆಂದು ತಿಳಿದು, ಅವರಿ ಉತ್ತರವಾಗಿ **"ಸೃಷ್ಠಿಕರ್ತ ಕೋಡ್–963"** ಎಂಬ ಗ್ರಂಥವನ್ನು ಬರೆದು ಪ್ರಕಟಿಸಿದ್ದೇವೆ. ಅಷ್ಟೇಅಲ್ಲದೇ ಅವರು ಎಲ್ಲಾದರೇ "ಸೃಷ್ಠಿಕರ್ತ ಕೋಡ್ 666" ಎಂದು ಬರೆದಿದ್ದಾರೋ ಅದರ ಪಕ್ಕದಲ್ಲೇ ನಾವು "ಸೃಷ್ಠಿಕರ್ತ ಕೋಡ್ 963" ಎಂದು ಬರೆಯುವುದು ನಡೆಯಿತು.

ಅಷ್ಟೇಅಲ್ಲದೇ ಸುಮಾರು ಆ ದಿನ ಒಟ್ಟಾರೆ ಆಂಧ್ರರಾಷ್ಟ್ರವೆಲ್ಲಾ ಅವರಿಗೆ ವಿದುದ್ಧವಾಗಿ "ಸೃಷ್ಠಿಕರ್ತ ಕೋಡ್ 963" ಎಂದು ಸುಮಾರು ಲಕ್ಷರೂಪಾಯಿಗಳು ಖರ್ಚುಮಾಡಿ ಬರೆಯಿಸುವುದು ನಡೆದಿದೆ. ಅದನ್ನು ನೋಡಿದ ಹಿಂದೂಗಳು ಸಂತೋಷಪಡಬೇಕಾಗಿರುವುದು ಹೋಗಿ, ನಮ್ಮ ಮೇಲೆ ಅಸೂಯೆಪಟ್ಟು ನಮ್ಮನ್ನು ಕ್ರೈಸ್ತವ ಪ್ರಚಾರಕರಾಗಿ ಭಾವಿಸಿ ದೂಷಿಸಿದ್ದಾರೆ. ಕ್ರೈಸ್ತರು ಸೃಷ್ಠಿಕರ್ತ ಕೋಡ್ 666 ಎಂದು ಬರೆದಾಗ ಸ್ಪಂದಿಸದ ಹಿಂದೂ ಸಂಘಗಳೆಲ್ಲವೂ, ನಮ್ಮನ್ನು ಕ್ರೈಸ್ತವ ಪ್ರಚಾರಕರಾಗಿ ದೂಷಿಸಿದ್ದಾರೆ. ನಾವು ಮಾಡಿದ ಕೆಲಸಕ್ಕೆ ಸಂತೋಷಪಡುವುದು ಬಿಟ್ಟು ದೂಷಿಸುವುದನ್ನು ನೋಡಿದ ಕ್ರೈಸ್ತರು ಹಿಂದೂಗಳಲ್ಲಿನ ಅಜ್ಞಾನವನ್ನು ನೋಡಿ ನಗಾಡಿದ್ದಾರೆ. ಕ್ರೈಸ್ತರು ಬರೆದಿರುವುದಕ್ಕೆ ವಿರುದ್ಧವಾಗಿ ಬರೆದಿದ್ದೇವೆಂದು ಒಬ್ಬ ಹಿಂದೂವೂ ಸಹ ಗ್ರಹಿಸದೇ ನಮ್ಮನ್ನು ಅವಹೇಳನವಾಗಿ ಮಾತನಾಡುವುದೇ ಅಲ್ಲದೇ ಕ್ರೈಸ್ತರೆನ್ನುವುದರಿಂದ, ಹಿಂದೂಗಳಲ್ಲಿ ಬಹಳಜನ ಕುರುಡರಿದ್ದಾರೆಂದು ನಮಗು ಸಹ ಅನುಭವಪೂರ್ವಕವಾಗಿ ತಿಳಿದುಹೋಯಿತು.

**ಪ್ರಶ್ನೆ :– ನೀವು ಎಲ್ಲಾ ಮತಗಳು ನಮಗೆ ಸಮಾನವೇ ಎಂದು ಹೇಳುತ್ತಿದ್ದೀರ ಅಲ್ಲವೇ! ಹಾಗಿರುವಾಗ ನೀವು ಕ್ರೈಸ್ತರಿಗೆ ವಿರುದ್ಧವಾಗಿ ಹಿಂದೂಗಳಿಗೆ ಅನುಕೂಲವಾಗಿ "ಸೃಷ್ಠಿಕರ್ತ ಕೋಡ್ 963" ಎಂದು ಯಾಕೆ ಬರೆದಿದ್ದೀರ? ಹಾಗೆ ಬರೆಯುವುದರಿಂದ ನೀವು ಹಿಂದೂಮತದಕಡೆ ಮಾತನಾಡಿದ ಹಾಗೆಯೇ ಅಲ್ಲವೇ! ಜ್ಞಾನವೆಂದರೇ ಏನೋ, ಮತಗ್ರಂಥಗಳೆಂದರೇ ಏನೋ ತಿಳಿಯದ ಹಿಂದೂ ಸಂಘದವರು ನೀವು ಮಾಡಿರುವುದು ಒಳ್ಳೆಯ ಕೆಲಸವೆಂದು**

**ಗ್ರಹಿಸದೇಹೋಗಿ ನಿಮ್ಮನ್ನು ದೂಷಿಸಿದ್ದಾರೆ. ಹಾಗಲ್ಲದೇ ಹಿಂದೂಗಳು ನೀವು ಕ್ರೈಸ್ತರಿಗೆ ವಿರುದ್ಧವಾಗಿ ಮಾಡಿದ್ದೀರೆಂದು ತಿಳಿದು ಹೊಗಳಿದ್ದರೇ, ನೀವೂ ಸಹ ಹಿಂದೂಮತವನ್ನು ಸಮರ್ಥಿಸುತ್ತಾ, ಕ್ರೈಸ್ತಮತವನ್ನು ವಿಮರ್ಶಿಸಿದಂತೆಯೇ ಆಗುತ್ತದೆ ಅಲ್ಲವೇ! ಯಾವಗಾದರೆ ನೀವು ಕ್ರೈಸ್ತರನ್ನು ವಿರೋಧಿಸಿ, ಸೃಷ್ಠಿಕರ್ತ ಕೋಡ್ 963 ಎಂದು ಬರೆದಿದ್ದೀರೋ ಭಗವದ್ಗೀತೆಯಲ್ಲಿ ಪುರುಷೋತ್ತಮಪ್ರಾಪ್ತಿ ಯೋಗದಲ್ಲಿ 16, 17 ಶ್ಲೋಕಗಳಲ್ಲಿಯೂ, 666 ಎಂಬ ಮಾತು ದೈವಾಸುರ ಸಂಪದ್ವಿಭಾಗ ಯೋಗದಲ್ಲಿ 14ನೇ ಶ್ಲೋಕದಲ್ಲಿ ಇದೆಯೆಂದು ಹೇಳಿದಾಗಲೇ, ನೀವು ಹಿಂದೂ ಮತದ ಸಲುವಾಗಿ ಮಾತನಾಡಿದಂತಾಗುತ್ತಿದೆ. ಇದನ್ನನುಸರಿಸಿ ಕ್ರೈಸ್ತಮತದಮೇಲೆ ಸ್ವಲ್ಪ ಅಸೂಯೆಯೇ ಇರುವಂತೆ ತಿಳಿಯುತ್ತಿದೆ. ಹಾಗೆ ಭಗವದ್ಗೀತೆಯನ್ನು ಸಮರ್ಥಿಸುತ್ತಾ, ಕ್ರೈಸ್ತರನ್ನು ವಿಮರ್ಶಿಸುತ್ತಿರುವುದರಿಂದ,** ಹಿಂದೂಗಳು ಅಜ್ಞಾನ ಕುರುಡುತನದಿಂದ **ಗುರುತಿಸಲಾರದೆ ಹೋದರೂ, ನಮ್ಮ ದೃಷ್ಠಿಯಲ್ಲಿ ನೀವು ಹಿಂದೂಮತ ಅಭಿಮಾನಿಯೆಂದೂ, ಕ್ರೈಸ್ತಮತ ದ್ವೇಷಿಯೆಂದು ಕಾಣಿಸುತ್ತಿದೆ. ಇದಕ್ಕೆ ನೀವು ಏನೆಂದು ಸಮಾಧಾನ ಹೇಳಬಲ್ಲಿರಾ**?

**ನನ್ನ ಉತ್ತರ :–** ನಾನು ಮತಗಳ ದೃಷ್ಠಿಯಿಂದ ಬರೆಯಲಿಲ್ಲ. ನನಗೆ ಮೂರು ಮತಗಳು ಸಮಾನವೇ. ನಾನು ಮೂರು ಮತಗಳವರಿಗೆ ಮಾರ್ಗದರ್ಶಕನಾಗಿ ದ್ದೇನೆ. ನಾನು ಮೂರು ಮತಗಳವರಿಗೆ ಅವರ ಗ್ರಂಥಗಳಲ್ಲಿ ಅರ್ಥವಾಗದ ವಿಷಯಗಳನ್ನು ವಿವರವಾಗಿ ಹೇಳುತ್ತಿದ್ದೇನೆ. ಹಾಗಿರುವಾಗ ಒಂದು ಮತ ಹೆಚ್ಚು, ಒಂದು ಮತ ಕಡಿಮೆ ಎಂದು ನಮ್ಮ ಭಾವನೆಯಲ್ಲಿ ಇರುವುದಿಲ್ಲ ಎಲ್ಲಿ ತಪ್ಪು ನಡೆದರೂ, ಅದು ಯಾವ ಮತದಲ್ಲಿ ನಡೆದರೂ, ಅದು ತಪ್ಪು ಇದು ಸರಿ ಎಂದು ಹೇಳುವುದು ನನ್ನ ಜವಾಬ್ದಾರಿ. ಆದ್ದರಿಂದ ಕ್ರೈಸ್ತರಲ್ಲಿ ಒಬ್ಬ ಬೋಧಕನು ಬರೆದಿರುವುದು ಬೈಬಲ್ ಗ್ರಂಥದಲ್ಲಿ ಹೇಳದ ವಿಷಯವಾದ್ದರಿಂದ ಅದು ಬೈಬಲ್‌ಗೇ ಸಹ ವಿರೋಧವೇ.

ಬೈಬಲ್‌ನಲ್ಲಿ ಕಟ್ಟಕಡೆಯಲ್ಲಿ "ಪರಮಾರ್ಥ ಜ್ಞಾನಿಯಾಗು ಯೊಹಾನು ಬರೆದಿರುವ ಪ್ರಕಟಣೆ ಗ್ರಂಥ" ಎನ್ನುವುದರಲ್ಲಿ 13ನೇ ಅಧ್ಯಾಯದಲ್ಲಿ 18ನೇ

ವಾಕ್ಯ **"ಬುದ್ಧಿ ಇರುವವನು ಮೃಗದ ಒಂದು ಸಂಖ್ಯೆಯನ್ನು ಲೆಕ್ಕಿಸಲುಬಿಡು, ಅದು ಒಬ್ಬ ಮನುಷ್ಯನ ಸಂಖ್ಯೆಯೇ, ಆ ಸಂಖ್ಯೆ ಆರುನೂರು ಅರವತ್ತಾರು. ಇದರಲ್ಲಿ ಜ್ಞಾನವಿರುವುದು"** ಎಂದು ಇದೆ. 13ನೇ ಅಧ್ಯಾಯದಲ್ಲಿ ಒಟ್ಟು ಎಲ್ಲ ವಾಕ್ಯಗಳು ಓದಿ ನೋಡಿದರೇ ಮಾಯೆಯನ್ನು ಅಥವಾ ಸಾತಾನ್‌ನನ್ನು ಮೃಗವೆಂದು ಅಂದಹಾಗೆ ತಿಳಿಯುತ್ತಿದೆ. ಈ ವಿಷಯವು ಯೊಹಾನು ಪ್ರಕಟಣೆಯ ಗ್ರಂಥಓದಿದ ಯಾರಿಗಾದರೂ ಅರ್ಥವಾಗಬಲ್ಲದು. ವಾಕ್ಯದಲ್ಲಿ "ಇದು ಒಬ್ಬ ಮನುಷ್ಯನ ಸಂಖ್ಯೆಯೇ" ಎಂದು ಇದೆ. ಮನುಷ್ಯನ ಸಂಖ್ಯೆ ಎಂದು ಇದೆ ಆದರೇ, ದೇವರ ಸಂಖ್ಯೆ ಎಂದು ಅಲ್ಲಿಲ್ಲ ಅಲ್ಲವೇ! ಸಾತಾನು (ಮಾಯ) ಮನುಷ್ಯನಲ್ಲಿ ಸುಲಭವಾಗಿ ಸೇರುತ್ತಿದೆ. ಆದಕಾರಣ ಅಲ್ಲಿ ಮನುಷ್ಯನಲ್ಲಿ ಸೇರಿರುವ ಸಾತಾನು ಸಂಖ್ಯೆಯಾಗಿ ನಾವು ಗುರುತಿಸಿಕೊಳ್ಳಬೇಕು. ನಾವು ಮಾಯೆ ಕೋಡ್ ಹೇಳಿದಾಗ ಸಹ ಅಜ್ಞಾನ ಮನುಷ್ಯನನ್ನು ನೋಡಿದಾಗ ಮಾಯೆ ಸಂಖ್ಯೆಯನ್ನು ಗುರುತಿಸಿಕೊಳ್ಳಬೇಕು ಎಂದು ಮೊದಲೇ ಹೇಳಿದ್ದೇವೆ. ಯೋಹಾನು ಪ್ರಕಟಣೆ ವಾಕ್ಯದಲ್ಲಿ "ಬುದ್ಧಿಯಿರುವವನು ಮೃಗದ ಒಂದು ಸಂಖ್ಯೆಯನ್ನು ಲೆಕ್ಕಿಸಲಿಬಿಡು" ಎಂದು ಇದೆ ಅಲ್ಲವೇ! ಅದರಲ್ಲಿನ ವಿವರದ ಪ್ರಕಾರ 'ಬುದ್ಧಿ ಇರುವವನು' ಎಂದು ಪ್ರತ್ಯೇಕವಾಗಿ ಹೇಳುವುದರಲ್ಲಿ ಜ್ಞಾನವಿರುವವನೆಂದು ಅರ್ಥವಾಗುತ್ತಿದೆ. ಜ್ಞಾನವಿರುವವನು ಅಜ್ಞಾನಿಯನ್ನು ನೋಡಿದಾಗ ಅವನಲ್ಲಿನ ಮಾಯೆಯನ್ನು 666ಆಗಿ ಗುರುತಿಸುವನೆಂದು ಮೊದಲ ಪುಟಗಳಲ್ಲಿಯೇ ಹೇಳಿದ್ದೇವೆ. ನಂತರ ಅದೇ ವಾಕ್ಯದಲ್ಲಿ "ಇದರಲ್ಲಿ ಜ್ಞಾನವಿದೆ" ಎಂದು ಹೇಳಲ್ಪಟ್ಟಿದೆ. ಅದರ ವಿವರವನ್ನು ನೋಡಿದರೇ ಜ್ಞಾನ ಇರುವವನು ಸಾಧಾರಣ ಮನುಷ್ಯನಲ್ಲಿನ ಮಾಯೆಯನ್ನು ಗುರುತಿಸಿ, ಮನುಷ್ಯನ ಭಾವನೆಯ ಪ್ರಕಾರ ಒಳಗಿರುವ ಸಾತಾನು (ಮಾಯೆಯನ್ನು) 666 ಆಗಿ ಗುರುತಿಸುವುದು ಜ್ಞಾನಮಾರ್ಗದಲ್ಲಿ ಇರುವವರಿಗೇ ಸಾಧ್ಯವಾಗುತ್ತದೆ ಎಂದು, ಇತರರಿಗೆ ತಿಳಿಯುವಂತೆ ಇದರಲ್ಲಿ ಜ್ಞಾನವಿದೆಯೆಂದು ಹೇಳಿದ್ದಾರೆ. ಇದೆಲ್ಲವನ್ನು ನೋಡಿದರೇ ದೇವರ ಜ್ಞಾನದ ಪ್ರಕಾರ ಜ್ಞಾನವಿರುವವನು, ಜ್ಞಾನವಿಲ್ಲದವನ ತಲೆಯೊಳಗೆ ಇರುವ ಮಾಯೆಯನ್ನು ಕಂಡುಹಿಡಿಯಬಲ್ಲನೆಂದು ಇತರರಿಗೆ ಸಹ ಅರ್ಥವಾಗುತ್ತಿದೆ. ಎಷ್ಟೋ ಸ್ಪಷ್ಟವಾಗಿ

ಸಾತಾನು ಸಂಖ್ಯೆ 666 ಎಂದು ಯೋಹಾನು ವಾಕ್ಯದಲ್ಲಿರುವಾಗ, ನಾವು ಇದಕ್ಕು ಮೊದಲೇ ವಿಲನ್ ಹೀರೋಆಗಿ ಚಲಾವಣೆ ಆಗುತ್ತಾನೆಂದು ಹೇಳಿಕೊಂಡಹಾಗೆ, ಮಾಯೆ ದೇವರಾಗಿ ಪ್ರಚಾರ ಮಾಡಿಕೊಳ್ಳುತ್ತಿದೆ. ಅದೇ ವಿಧವಾಗಿ ಸಾತಾನ್ ಒಳ್ಳೆಯ ಹೆಸರಿರುವ ಬೋಧಕನ ತಲೆಯಲ್ಲಿ ತೂರಿ ತನ್ನ ಸಂಖ್ಯೆಯನ್ನು ದೇವರ ಸಂಖ್ಯೆಯಾಗಿ ಪ್ರಕಟಿಸುವಂತೆ ಮಾಡಿದೆ. ಚಿಕ್ಕಚಿಕ್ಕ ಬೋಧಕರಿಂದ ಹೇಳಿಸಿದರೇ ದೇವರ ಭಕ್ತರಾದವರು ನಂಬುವುದಿಲ್ಲವೇನೋ ಎಂದು, ಯಾರಿಂದ ಹೇಳಿಸಿದರೇ ಚೆನ್ನಾಗಿರುತ್ತದೋ ಅವರನ್ನು ಆಯ್ಕೆಮಾಡಿ ಕೊಂಡು ಹೇಳಿಸುವುದರಿಂದ ಅಷ್ಟಿಲ್ಲದೇ ಅಷ್ಟು ದೊಡ್ಡವನು ಹೇಳುತ್ತಾನಾ! ಎಂದು ತಪ್ಪದೆ ನಂಬುತ್ತಾರೆಂದು ದೈವಜ್ಞಾನಿ, ಆತ್ಮಜ್ಞಾನಿ, ಜಯಶಾಲಿ ಎಂಬ ಬಿರುದಾಂಕಿತಗಳಿರುವ ಬೋಧಕನಿಂದ "ಸೃಷ್ಠಿಕರ್ತ ಕೋಡ್ 666" ಎಂದು ಉಪನ್ಯಾಸಗಳಲ್ಲಿ ಹೇಳಿಸಿದೆ, ಗೋಡೆಗಳ ಮೇಲೆ ಬರೆಯಿಸಿದೆ. ಅದನ್ನು ನೋಡಿದ ಬಹಳಜನ ದೈವಭಕ್ತರು ದೊಡ್ಡದೈವಜ್ಞಾನಿ, ಆತ್ಮಜ್ಞಾನಿಯಾದ ವ್ಯಕ್ತಿ ಬರೆದಿರುವ ಮಾತು ನಿಜವೇ ಇರುತ್ತದೆ, ಎಂದು ಪೂರ್ತಿಯಾಗಿ ನಂಬಿ ದೇವರ ಸಂಖ್ಯೆಯನ್ನು 666 ಆಗಿ ಗುರುತಿಸಿಕೊಂಡು, ಅವರು ಸಹ ಸಾತಾನ್ ಬಲೆಯಲ್ಲಿ ಸಿಲುಕಿಕೊಂಡು ಹೋಗಿದ್ದಾರೆ. ಇದು ದೇವರ ಸಂಖ್ಯೆಯಲ್ಲ, ಸಾತಾನ್ ಸಂಖ್ಯೆ ಎಂದು ಯಾರೂ ಎದುರು ಹೇಳಲಾರದೆ, ಅದು ದೇವರ ಸಂಖ್ಯೆಯೇ ಆಗಿರುತ್ತದೆ, ದೇವರ ಸಂಖ್ಯೆ ಆಗದಿದ್ದರೇ ಆತ್ಮಜ್ಞಾನಿ ಹಾಗೆ ಹೇಳುತ್ತಾನಾ! ಎಂದು ಅಂದುಕೊಂಡಿದ್ದಾರೆ.

ಬೈಬಲನ್ನು, ಭಗವದ್ಗೀತೆಯನ್ನು ಎರಡನ್ನೂ ಓದಿ ಅದರಲ್ಲಿನ ಜ್ಞಾನವನ್ನು ತಿಳಿದ ಕೆಲವರು ದೈವಭಕ್ತರು ತಮ್ಮ ಜ್ಞಾನದಿಂದ 666 ಎಂಬ ಸಂಖ್ಯೆ ಇತ್ತಾ ಗೀತೆಯಲ್ಲಿ ಮಾಯೆಗೆ ಗುರುತಾಗಿಯೇ ಕಾಣಿಸುತ್ತಿದೆ, ಅತ್ತಾ ಬೈಬಲ್‌ನಲ್ಲೂ ಮಾಯ (ಸಾತಾನ್) ಒಂದರ ಗುರುತಾಗಿಯೇ ತಿಳಿಯುತ್ತಿದೆ.

ಈ ವಿಧವಾಗಿ ದ್ವಿತೀಯ ದೈವಗ್ರಂಥವಾದ ಬೈಬಲ್‌ನಲ್ಲಿ 666 ಎನ್ನುವುದು ಮಾಯೆಗೆ ಗುರುತಾಗಿ ಹೇಳಿದ್ದರೇ, ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಸಹ ಮಾಯೆಗೆ ಗುರುತು 666 ಎಂದು ತಿಳಿಯುತ್ತಿರುವು

ದರಿಂದ, ಈ ವಿಷಯವು ಸೃಷ್ಠಿಕರ್ತ ಗುರುತೆಂದು ಕ್ರೈಸ್ತರು ಬರೆಯುವುದು ತಪ್ಪೆಂದು ತಿಳಿದ ನಾನು, ಎರಡು ದೈವಗ್ರಂಥಗಳನ್ನು ಎಲ್ಲರೂ ಅರ್ಥ ಮಾಡಿಕೊಳ್ಳುವಹಾಗೆ ವಿವರಿಸಿ ಹೇಳಿದ್ದೇನೆ. ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿರುವ 16, 17 ಶ್ಲೋಕಗಳ ಆಧಾರದಿಂದ ಸೃಷ್ಠಿಕರ್ತ ಕೋಡ್ 963 ಎಂದು ಹೇಳಲಾಗಿದ್ದೇವೆ. ದೈವಗ್ರಂಥಗಳನ್ನು ತಪ್ಪಾಗಿ ಅರ್ಥ ಮಾಡಿಕೊಳ್ಳದೇ, ದೈವಗ್ರಂಥಗಳಿಗೆ ಬೆಲೆ, ಗೌರವ ಬರುವಹಾಗೆ ಎರಡು ಗ್ರಂಥ ಗಳಲ್ಲಿನ ವಾಕ್ಯಗಳನ್ನು ವಿವರಿಸಿ ಬರೆದಿದ್ದೇನೆ. ಯಾವ ಗ್ರಂಥದಲ್ಲಿ ಎಲ್ಲಿ 666 ಮಾಯೆ ಗುರುತೆಂದು ಹೇಳಿದ್ದಾರೋ, ಯಾವ ಗ್ರಂಥದಲ್ಲಿ 963 ದೇವರ ಗುರುತೆಂದು ಹೇಳಿದ್ದಾರೋ ವಿವರಿಸಿ ಹೇಳಿದ್ದೇವೆ. ಇಲ್ಲಿ ಮತಗಳ ಪ್ರಸ್ತಾಪನೆ ಇಲ್ಲ. ಗ್ರಂಥಗಳ ಪ್ರಸ್ತಾಪ ಮಾತ್ರವಿದೆ. ಆ ವಿಷಯವನ್ನು ಪ್ರತಿಯೊಬ್ಬರೂ ಗ್ರಹಿಸಬೇಕು.

ಮೂರುಮತ ಗ್ರಂಥಗಳು ಒಬ್ಬನೇ ದೇವರು ಹೇಳಿರುವ ಜ್ಞಾನದೊಂದಿಗೆ ತುಂಬಿಕೊಂಡಿವೆ. ಅವುಗಳಲ್ಲಿ ತಪ್ಪಿರುವುದಿಲ್ಲ. ಮನುಷ್ಯರು ಅರ್ಥಮಾಡಿಕೊಳ್ಳುವು ದರಲ್ಲಿ ತಪ್ಪುಗಳಿರಬಹುದು. ಅದೇ ವಿಷಯವೇ ಇಲ್ಲಿ ನಡೆದಿದೆ. ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 16, 17 ಶ್ಲೋಕಗಳಲ್ಲಿ ದೇವರಗುರುತಾದ 963 ಎಂಬ ಸಂಖ್ಯೆ ಹೇಗಿರುವುದೋ ವಿವರಿಸಿ ಹೇಳಿದ್ದೇವೆ. ಹಾಗೆಯೇ ಮೊದಲ ದೈವಗ್ರಂಥವಾದ ಭಗವದ್ಗೀತೆಯಲ್ಲಿಯೇ ದೈವಾಸುರ ಸಂಪದ್ವಿಭಾಗ ಯೋಗದಲ್ಲಿ

14ನೆ ಶ್ಲೋಕದಲ್ಲಿ ಮಾಯೆಗುರುತು 666 ಎನ್ನುವುದು ಹೇಗಿರುವುದೋ ಗಣಿತದ ಪ್ರಕಾರ ಹೇಳಿದ್ದೇವೆ. ಇಲ್ಲಿ ದೈವಗ್ರಂಥದ ಒಂದು ವಿಶೇಷತೆಯನ್ನು ಹೇಳಿದ್ದೇವೆ ಹೊರತು, ಮತವೆಂಬ ಅಸೂಯೆ ನನಗಿಲ್ಲ. ಪ್ರಥಮ ದೈವಗ್ರಂಥವಾದ ಭಗವದ್ಗೀತೆಯನ್ನು ಹೇಗೆ ವಿವರಿಸಿ ಹೇಳಿದ್ದೇವೋ, ಹಾಗೆಯೇ ಅದೇ ಗೌರವದಿಂದ ಎರಡನೆಯ ದೈವಗ್ರಂಥವಾದ ಬೈಬಲ್‌ನಲ್ಲಿನ ಬರಹವನ್ನು ತೋರಿಸುತ್ತಾ, ಅಲ್ಲಿ ದೇವರ ಗುರುತನ್ನು, ಮಾಯೆ ಗುರುತನ್ನು ವಿವರಿಸಿ

ಹೇಳಿದ್ದೇವೆ. ಬೈಬಲ್ ಗ್ರಂಥದಲ್ಲಿ ಕೊನೆಯ ಪಾಠವಾದ **"ಯೋಹಾನ್ ಬರೆದಿರುವ ಪ್ರಕಟಣೆಗಳ ಗ್ರಂಥ"** ಎನ್ನುವುದರಲ್ಲಿ 9ನೇ ಅಧ್ಯಾಯದಲ್ಲಿ 4ನೇ ವಚನದಲ್ಲಿ ದೇವರ ಗುರುತನ್ನು ಸೂಚಿಸುವ ವಿಷಯವಿರುವುದು. ಅದು ಹೀಗೆ ಬರೆಯಲ್ಪಟ್ಟಿದೆ. **(ಪ್ರಕಟಣೆಗಳು 9–4) "ಹಣೆಯ ಮೇಲೆ ದೇವರ ಮುದ್ರೆ ಇಲ್ಲದ ಮನುಷ್ಯರಿಗೇ ಹೊರತು ಭೂಮಿ ಮೇಲಿರುವ ಹುಲ್ಲಿಗಾದರೂ, ಯಾವ ಗಿಡಕ್ಕಾದರೂ, ಮತ್ತು ಯಾವ ವೃಕ್ಷಕ್ಕಾದರೂ ಹಾನಿ ಉಂಟುಮಾಡಬಾರದೆಂದು ಅವುಗಳಿಗೆ ಆಜ್ಞೆ ಕೊಡಲಾಗಿದೆ"** ಎಂದು ಇದೆ. ಈ ವಿಧವಾಗಿ ದೇವರ ಮುದ್ರೆಯನ್ನು ಅಥವಾ ದೇವರ ಗುರುತನ್ನು ಕುರಿತು ಹೇಳಿದ್ದರೇ, 13ನೇ ಅಧ್ಯಾಯದಲ್ಲಿ 18ನೇ ವಾಕ್ಯದಲ್ಲಿ ಸಾತಾನ್ ಗುರುತನ್ನು ಅಥವಾ ಮಾಯೆ ಗುರುತನ್ನು ಕುರಿತು ಹೀಗೆ ಹೇಳಿದ್ದಾರೆ ನೋಡಿರಿ. (ಪ್ರಕಟಣೆಗಳು 13–18) **"ಬುದ್ಧಿಯಿರುವವನು ಮೃಗದ ಒಂದು ಸಂಖ್ಯೆಯನ್ನು ಲೆಕ್ಕಿಸಲಿಬಿಡು. ಅದು ಒಬ್ಬ ಮನುಷ್ಯನ ಸಂಖ್ಯೆಯೇ. ಆ ಸಂಖ್ಯೆ ಆರುನೂರ ಅರವತ್ತಾರು. ಇದರಲ್ಲಿ ಜ್ಞಾನವಿದೆ"** ಎಂದು ಇದೆ. ಈ ವಿಧವಾಗಿ ಭಗವದ್ಗೀತೆಯಲ್ಲಿ 15,16 ಎರಡು ಅಧ್ಯಾಯಗಳಲ್ಲಿ 16, 17 ಎರಡುಶ್ಲೋಕಗಳಲ್ಲಿ ದೇವರ ಗುರುತನ್ನು, 17ನೇ ಅಧ್ಯಾಯ 14ನೇ ಶ್ಲೋಕದಲ್ಲಿ ಮಾಯೆ ಗುರುತನ್ನು ಕುರಿತು ಹೇಳಿರುವಾಗ, ಅದೇ ವಿಧವಾಗಿ ಬೈಬಲ್ ಗ್ರಂಥದಲ್ಲಿ ಸಹ ಪ್ರಕಟಣೆಗಳು ಎನ್ನುವುದರಲ್ಲಿ 9ನೇ ಅಧ್ಯಾಯ 4ನೇ ವಾಕ್ಯದಲ್ಲಿ ದೇವರ ಗುರುತನ್ನು ಕುರಿತು, 13ನೇ ಅಧ್ಯಾಯ 18ನೇ ವಾಕ್ಯದಲ್ಲಿ ಮಾಯೆ ಗುರುತನ್ನು ಕುರಿತು ಹೇಳಿದ್ದಾರೆ. ಈ ವಿಷಯವನ್ನು ತಿಳಿಸುವ ನಿಮಿತ್ತ **"ಸೃಷ್ಟಿಕರ್ತ ಕೋಡ್ 963–ಮಾಯೆ ಕೋಡ್ 666"** ಎಂಬ ಗ್ರಂಥವನ್ನು ಬರೆದಿದ್ದೇವೆ.

ಸೃಷ್ಟಿಕರ್ತ ಎಂಬ ಹೆಸರನ್ನು ನಮ್ಮ ಗ್ರಂಥದ ಮೇಲೆ ನೋಡುತ್ತಲೇ ಗ್ರಂಥದಲ್ಲಿನ ವಿಷಯವನ್ನು ಓದದೇ ಸೃಷ್ಟಿಕರ್ತ ಎಂಬ ಪದವನ್ನು ಕ್ರೈಸ್ತರೇ ಬಳಸುತ್ತಾರೆ. ಹಿಂದೂಗಳು ಆ ಪದವನ್ನು ಬಳಸುವುದಿಲ್ಲ. ಸೃಷ್ಟಿಕರ್ತ ಕೋಡ್ 963 ಎಂದು ಬರೆದಿರುವವರು ಪಕ್ಕಾ ಕ್ರೈಸ್ತರೇ ಎಂದು ಕೆಲವರು ನಮ್ಮನ್ನು ಆರೋಪಿಸುವುದು ನಡೆದಿದೆ. ಸೃಷ್ಟಿಕರ್ತ ಎಂಬ ಪದವು ಭಗವದ್ಗೀತೆಯಲ್ಲಿದ್ದರೂ,

సృష్టికర్త కోడ్-963

భగవద్గీత అ.15-శ్లో॥16,17

మాయ (సాతాన్) కోడ్-666

భగవద్గీత అ.16-శ్లో॥14



రచయిత: త్రైతసిద్ధాంత ఆదికర్త, పీఠాధిపతి

శ్రీశ్రీశ్రీ ఆచార్య ప్రబోధానంద యోగీశ్వరులు

ಅದು ನಮ್ಮ ಪದವಲ್ಲ ಕ್ರೈಸ್ತರದೇ ಎನ್ನುವ ಹಿಂದೂಗಳಿದ್ದಾರೆಂದರೇ ಆಶ್ಚರ್ಯ ಹೋಗಬೇಕಾದ ಅವಶ್ಯವಿಲ್ಲ. ಸ್ವತಃವಾಗಿ ನಾವು ಸೃಷ್ಠಿಕರ್ತ ಎಂಬ ಪದವನ್ನು ಉಪಯೋಗಿಸುವುದರಿಂದ, ಹಿಂದೂಮತ ರಕ್ಷಣೆ ಸಂಘಗಳನ್ನು ಸ್ಥಾಪಿಸಿ ಕೊಂಡವರೇ ಹಾಗೆ ಅಂದಿದ್ದಾರೆ ಎಂದರೇ, ಹಿಂದೂಗಳಲ್ಲಿ ಎಂದರೇ ಹಿಂದೂ ರಕ್ಷಕ ಸಂಘಗಳಲ್ಲಿ ಜ್ಞಾನವೆಷ್ಟಿರುವುದೋ ಅರ್ಥವಾಗುತ್ತಿದೆ. ಸೃಷ್ಠಿಕರ್ತ ಎಂದರೇ ಪ್ರಪಂಚವನ್ನು ಸೃಷ್ಠಿಸಿದ ದೇವರೆಂದು ಅರ್ಥವಿರುವಾಗ, ಎರಡುಸಾವಿರ ವರ್ಷಗಳ ಪೂರ್ವದಲ್ಲಿ ಬಂದಿರುವ ಕ್ರೈಸ್ತವ ಮತದವರಿಗೆ ಸೃಷ್ಠಿಕರ್ತ ಎಂಬ ಪದವನ್ನು ಲೀಜಿಗೆ ಕೊಟ್ಟಂತೆ ಹಿಂದೂಗಳು ಮಾತನಾಡುವುದು ನಮಗೆ ಆಶ್ಚರ್ಯ ವಾಗಿದ್ದರೂ ಅವರ ದೃಷ್ಠಿಯಲ್ಲಿ ನಾವು ಅಜ್ಞಾನಿಗಳಾಗಿ, ಅನ್ಯಮತ ಪ್ರಚಾರಕರಾಗಿ ಕಾಣಿಸಿದ್ದೇವೆ. ನಮ್ಮ ಗ್ರಂಥವನ್ನು ಓದಿರಿ ನಾವು ಬರೆದಿರುವ ವಿಷಯಕ್ಕೆ ನಮ್ಮ ಗ್ರಂಥಗಳೇ ಎಷ್ಟೋ ವಿವರವಿದೆಯೆಂದು ಹೇಳಿದರೂ, ನಮ್ಮ ಮಾತನ್ನು ಕೇಳುವ ಸ್ಥಿತಿಯಲ್ಲಿ ಇಲ್ಲದೇ ನಾವು ಅನ್ಯಮತ ಪ್ರಚಾರ ಮಾಡುತ್ತಿದ್ದೇವೆಂದು ಕೇಸುಗಳು ಸಹ ನಮ್ಮ ಮೇಲೆ ಕೊಡುವುದು ನಡೆದಿದೆ.

ಈ ವಿಧವಾಗಿ ಎಲ್ಲ ಮತಗಳಲ್ಲಿ ಕೆಲವರು ಜ್ಞಾನಿಗಳಿರುವಾಗ, ಎಷ್ಟೋಜನ ಅಜ್ಞಾನಿಗಳಿದ್ದಾರೆ. ಆದರೇ ಅಜ್ಞಾನಿಗಳು ತಾವು ಜ್ಞಾನಿಗಳೆನಿಸಿ ಕೊಳ್ಳುವುದಕ್ಕೆ ನಿಜವಾದ ಜ್ಞಾನಿಗಳನ್ನು ಸಹ ಅವಮಾನಪಾಲು ಮಾಡುತ್ತಿರುತ್ತಾರೆ. ಹಿಂದೂ ಮತದಲ್ಲಿ ಎಷ್ಟೋಜ್ಞಾನಹೊಂದಿ, ಎಷ್ಟೋಜನಕ್ಕೆ ಜ್ಞಾನವನ್ನು ಬೋಧಿಸುತ್ತಿರುವ ನಮ್ಮನ್ನು ಅಜ್ಞಾನಿಗಳೆಂದು ದೂಷಿಸುವುದು ನಡೆದಿದೆ. ಆದರೂ ಸಹನೆಯಿಂದ ನಾವು ದೈವಜ್ಞಾನವನ್ನು ತಿಳಿಸುತ್ತಿದ್ದೇವೆ. ಮೂರುಮತಗಳಿಂದ ನಾವು ಕೆಲವು ತೊಂದರೆಗಳ ಪಾಲಾದರೂ ಮುಸ್ಲಿಮ್‌ರಿಗಿಂತಲೂ ಹಿಂದೂಗಳ ಮೂಲಕ ಮತ್ತು ಕ್ರೈಸ್ತರ ಮೂಲಕ ಹೆಚ್ಚು ಹಿಂಸಿಸಲ್ಪಟ್ಟಿದ್ದೇವೆಂದು ಹೇಳಬಹುದು. ಮುಸ್ಲಿಮ್‌ರಿಗೆ ವಿವರ ಹೇಳಿದರೇ ಕೇಳಬಲ್ಲರು. ಆದರೇ ಇಲ್ಲಿ ಹಿಂದೂಗಳು ಕೇಳುವ ಸ್ಥಿತಿಯಲ್ಲಿ ಇಲ್ಲದೇ ಎಲ್ಲರಿಗಿಂತಲೂ ಎಲ್ಲಾ ತಿಳಿದ ಜ್ಞಾನಿಗಳೆಂದು ಅಂದುಕೊಳ್ಳುತ್ತಿದ್ದಾರೆ. ನಾವು ಏನು ಹೇಳುತ್ತಿದ್ದೇವೆ, ಏನು ಬರೆದಿದ್ದೇವೆ ಎಂದು

ಸ್ವಲ್ಪವಾದರೂ ನೋಡದೇ ಕುರುಡರಂತೆ ಮಾತನಾಡುತ್ತಿದ್ದಾರೆ. ಕ್ರೈಸ್ತರ ವಿಷಯಕ್ಕೆ ಬಂದರೇ, ಅವರು "ಇತರರು ಬರೆದಿರುವುದನ್ನು ಓದುವುದಿಲ್ಲ. ಇತರರು ಹೇಳಿರುವುದನ್ನು ಕೇಳುವುದಿಲ್ಲ" ಎಂದು ಗೋಡೆ ಕಟ್ಟಿಕೊಂಡಿದ್ದಾರೆ. ಅಂತಹ ಸ್ಥಿತಿಯಲ್ಲಿ ಅವರು ಏನೂ ನೋಡದೇ, ಏನೂ ಓದದೇ ಇದ್ದೂ ನಮ್ಮ ಮೇಲೆ ಅಸೂಯೆಯನ್ನು ಪ್ರದರ್ಶಿಸುತ್ತಿದ್ದಾರೆ. ಕ್ರೈಸ್ತರೆಂದರೇ ಎಲ್ಲರೂ ಎಂದು ಅರ್ಥವಲ್ಲ, ಕೆಲವರು ಮಾತ್ರವೇ ಅಜ್ಞಾನದಿಂದ ನಮ್ಮನ್ನು ಅಸೂಯೆಯಿಂದ ನೋಡುತ್ತಾ ಅವರಲ್ಲಿನ ಉಗ್ರವಾದವನ್ನು ಕಾಣಿಸದೇ ಪ್ರಯೋಗಿಸುತ್ತಿದ್ದಾರೆ.

**ಪ್ರಶ್ನೆ :– ಹಿಂದೂಗಳು ನಿಮ್ಮನ್ನು ಅರ್ಥ ಮಾಡಿಕೊಳ್ಳಲಾರದೆ ವಿರೋಧಿಸಿದ್ದಾರೆ. ಹಾಗೆಯೇ ಮುಸ್ಲಿಮ್‌ಗಳು ಕೆಲವು ಸಂದರ್ಭಗಳಲ್ಲಿ ಬೆದರಿಸಿದ್ದಾರೆ. ಅವರದು ಕಾಣಿಸುವ ಉಗ್ರವಾದ ಎಂದು ನೀವು ಹೇಳಿದ್ದೀರ. ಆದರೇ ಕ್ರೈಸ್ತರದು ಕಾಣಿಸದ ಉಗ್ರವಾದವೆಂದು ಎಂದಿದ್ದೀರ. ಅದು ನಿಮಗೆ ಹೇಗೆ ಕಾಣಿಸಿದೆಯೋ? ನೀವು ಏಕೆ ಹಾಗೆ ಅಂದಿದ್ದೀರ ಹೇಳಬಲ್ಲಿರಾ?**

**ಉತ್ತರ :–** ಕಾಣಿಸುವುದು ಕಾಣಿಸದಿರುವುದು ಎಂದರೆ ಏನೋ ನಿಮಗೆ ಸ್ವಲ್ಪ ಅರ್ಥವಾಗುವಂತೆ ಒಂದು ವಿಷಯವನ್ನು ಹೇಳುತ್ತೇನೆ. ಅದನ್ನನುಸರಿಸಿ ಕಾಣಿಸದಿರುವುದು ಹೇಗಿರುತ್ತದೋ ತಿಳಿದುಹೋಗುತ್ತದೆ. ಸೊಳ್ಳೆ ಮನುಷ್ಯರ ಕೈಮೇಲೋ, ಕಾಲುಗಳ ಮೇಲೋ ಕಚ್ಚುತ್ತದೆ. ಸೊಳ್ಳೆ ಕಚ್ಚುವಾಗ ಕಚ್ಚಿಸಿಕೊಳ್ಳುವ ವನಿಗೆ ತಿಳಿಯುತ್ತದೆ, ಪಕ್ಕದಲ್ಲಿ ನೋಡುವವನಿಗೆ ಸಹ ತಿಳಿಯುತ್ತದೆ. ಆದರೇ ಇರುವೆ ಎಲ್ಲೋ ಒಳಗೆ ಬಟ್ಟೆಯೊಳಗೆ ಹೋಗಿ ಕಾಣಿಸದೆ ಕಚ್ಚುತ್ತದೆ. ಇರುವೆ ಕಚ್ಚಿದಂತೆ ತಿಳಿದರೂ ಆಗ ಅದನ್ನು ಏನು ಮಾಡಲಾರೆವು. ಹೊರಗೆ ಕಾಣಿಸುವ ಸೊಳ್ಳೆಯನ್ನಾದರೇ ಅದನ್ನು ಓಡಿಸಬಹುದು. ಕಚ್ಚಿದ ಜಾಗಾದಿಂದ ಕೂಡಲೇ ಓಡಿಸಬಹುದು. ಸೊಳ್ಳೆ ಕಚ್ಚುವುದು ಕಾಣಿಸುವುದರಿಂದ ಅದಕ್ಕೆ ತಕ್ಕ ಎಚ್ಚರ ವಹಿಸಬಹುದು. ಆದರೇ ಯಾವಾಗಲೋ ಒಂದುಬಾರಿ ಕಚ್ಚುವ ಇರುವೆಗಾಗಿ ಮುಂಚೆ ಎಂತಹ ಜಾಗ್ರತೆಗಳು ತೆಗೆದುಕೊಳ್ಳಲಾಗುವುದಿಲ್ಲ. ಸೊಳ್ಳೆ ಕಚ್ಚಿದರೇ ಬೆಚ್ಚುಬೀಳುವಷ್ಟು ನೋವು ಇರುವುದಿಲ್ಲ. ಆದರೇ ಸೊಳ್ಳೆಗಿಂತಲೂ ಚಿಕ್ಕದಾಗಿರುವ

ಇರುವೆ ಕಚ್ಚಿದರೇ ನಿದ್ರೆಯಲ್ಲಿರುವ ಮನುಷ್ಯ ಸಹ ಎಚ್ಚರಗೊಳ್ಳುವನು. ಎಚ್ಚರದಲ್ಲಿ ಇರುವವನು ಎಗುರಿಬೀಳುವಂಥ ನೋವು ಉಂಟಾಗುವುದು. ಸೊಳ್ಳೆ, ಇರುವೆ ವಿಧಾನವು ಹೇಗಿದೆಯೋ ಹಾಗೆಯೇ ಕಾಣಿಸುವ ಉಗ್ರವಾದ, ಕಾಣಿಸದ ಉಗ್ರವಾದ ಇದೆ. ಸೊಳ್ಳೆ ಕಚ್ಚಿದಂತೆ ಹಿಂದೂಗಳ, ಮುಸ್ಲಿಮ್‌ಗಳ ಉಗ್ರವಾದ ವಿರುವಾಗ, ಇರುವೆ ಕಚ್ಚಿದಂತೆ ಕ್ರೈಸ್ತರ ಉಗ್ರವಾದವಿದೆ. ಸೊಳ್ಳೆಗಳು ಪ್ರತಿದಿನ ಕಚ್ಚುವಂತೆ ಹಿಂದೂಗಳ ಮತ್ತು ಮುಸ್ಲಿಮ್‌ಗಳ ಉಗ್ರವಾದ ಪ್ರತಿದಿನ ಎಲ್ಲೋ ಒಂದುಕಡೆ ನಡೆಯುವಂತೆ ತಿಳಿಯುತ್ತಿದೆ. ಕ್ರೈಸ್ತರು ಉಗ್ರವಾದಿಗಳಲ್ಲ ಎನ್ನುವಂತೆ ಇರುವೆಗಳಹಾಗೆ ಅವುಗಳ ದಾರಿಯಲ್ಲವು ಹೋದಂತಿರುವುದು. ಇರುವೆಗಳು ಮನುಷ್ಯರ  ಸಹವಾಸಕ್ಕೆ ಬರುವುದಿಲ್ಲ ಎನ್ನುವಂತಿದ್ದರೂ, ಯಾವಾಗಲೋ ಒಂದುಬಾರಿ ಮನುಷ್ಯ ಎಗಿರಿಬೀಳುವಂತೆ ಕಚ್ಚಬಲ್ಲವು. ಹಾಗೆಯೇ ಕ್ರೈಸ್ತರು ಸೌಮ್ಯವಾಗಿ, ಶಾಂತಿ ಇರುವವರಹಾಗೆ ಕಾಣಿಸಿದರೂ, ಯಾವಾಗಲೋ ಒಂದುಬಾರಿ ತಮ್ಮಲ್ಲಿ ಸಹ ಅಸೂಯೆ ಇರುವಂತೆ ಎಲ್ಲರಿಗೂ ಅರ್ಥವಾಗುವಂತೆ ತಮ್ಮ ಶತ್ರು ಭಾವನೆಯನ್ನು ಯಾರಿಗೂ ಅರ್ಥವಾಗದೇ, ಯಾರಿಗೂ ತಿಳಿಯದಂತೆ ಮಾಡಬಲ್ಲರು. ನಾವು ಮೂರು ಮತಗಳ ಜ್ಞಾನ ಹೇಳುವುದರಿಂದ, ಮೂರು ಮತದವರು ಅವರು ನಮ್ಮಮೇಲೆ ಉಗ್ರವಾದವನ್ನು ತೋರಿದ್ದಾರೆ.

**ಪ್ರಶ್ನೆ :– ಉಗ್ರವಾದವೆಂದರೇ ಇತರರಿಗೆ ಹಾನಿ ಉಂಟುಮಾಡುವುದೆಂದು ಅರ್ಥ. ನಿಮಗೆ ಹಿಂದೂಗಳಿಂದ, ಮುಸ್ಲಿಮ್‌ಗಳಿಂದ ವಿರೋಧ ಪ್ರತ್ಯಕ್ಷವಾಗಿ ಎದುರಾಗಿದೆ. ಕ್ರೈಸ್ತರಿಂದ ವಿರೋಧ ಬಂದರೂ ಬಂದಿರಬಹುದು. ಆದರೇ ಅದು ಕಾಣಿಸದಿರುವುದು, ಇತರರು ಗುರುತು ಹಿಡಿಯಲಾರದೆ ಇರುವುದರಿಂದ ನೀವು ಅದನ್ನು ಹೇಗೆ ಕಂಡುಕೊಂಡಿದ್ದೀರಿ? ಇದು ಕ್ರೈಸ್ತರ ಉಗ್ರವಾದವೆಂದು ಹೇಗೆ ಹೇಳುತ್ತಿದ್ದೀರ?**

**ಉತ್ತರ :–** ಕ್ರೈಸ್ತರ ಉಗ್ರವಾದವು ಇರುವೆ ಕಚ್ಚಿದಂತಿರುತ್ತದೆ. ಆದರೂ ಕಚ್ಚಿರುವುದು ಇರುವೆಯೇ ಎಂದು ಕಾಣಿಸುವುದಿಲ್ಲ. ಹಾಗೆ ತಿಳಿಯದೇ ಕಚ್ಚುವುದು ಇರುವೆಯೇ ಎಂದು ಅಂದುಕೊಳ್ಳಬೇಕಾಗಿದೇ. ಕೆಲವು ಸಂದರ್ಭಗಳಲ್ಲಿ ಇರುವೆ ಕಾಣಿಸಿದರೂ,

ಇಷ್ಟು ಚಿಕ್ಕ ಇರುವೆ ಅಷ್ಟು ದೊಡ್ಡದಾಗಿ ಕಚ್ಚಿದೆಯಾ! ಎಂದು ಅನುಮಾನ ಬರಬಹುದು. ಸೊಳ್ಳೆಗಳು ರಾತ್ರಿ ಹೊತ್ತೇ ಹೊರಗೆ ಬರುತ್ತವೆ. ಆಗಲೇ ಕಚ್ಚಬಲ್ಲವು. ಆದರೇ ಇರುವೆಗಳು ಹಗಲುಹೊತ್ತು ಸಹ ನಮಗೆ ಸಮೀಪದಲ್ಲಿಯೇ ತಿರುಗುತ್ತಾ ಅವುಗಳಿಂದ ನಮಗೆ ಯಾವ ಹಾನಿ ಇರುವುದಿಲ್ಲವೆನ್ನುವಂತೆ ಇರುತ್ತದೆ. ಆದರೂ ಯಾವಾಗಲೋ ಒಂದುಬಾರಿ ಅದರಕಡಿತದ ರುಚಿ ನೋಡಿಸುತ್ತದೆ. ಹಾಗೆಯೇ ಕ್ರೈಸ್ತರು ನಮ್ಮ ಪಕ್ಕದಲ್ಲೇ ಇದ್ದರೂ ಅವರು ಯಾರ ಸಾಹವಾಸಕ್ಕೆ ಹೋಗುವುದಿಲ್ಲ. ಅವರು ಇತರರು ಏನೆಂದರೂ  ಶಾಂತವಾಗಿ ಇರುತ್ತಾರೆಂದು ಅಂದುಕೊಳ್ಳುತ್ತೇವೆ. ನಾನು ಅದೇ ವಿಧವಾಗಿ ಅಂದುಕೊಂಡಿದ್ದೆನು. ಮನುಷ್ಯನಾದ ಪ್ರತಿಯೊಬ್ಬನು ಗುಣಗಳಿಗೆ ಒಳಗಾಗಿ ಕೆಲಸ ಮಾಡುತ್ತಿರುತ್ತಾನೆ. ಯಾವ ಗುಣವು ಯಾವುದನ್ನು ಸೂಚಿಸಿದರೇ ಅದನ್ನೇ ಮನುಷ್ಯ ಮಾಡಬಲ್ಲನು. ಕ್ರೈಸ್ತರು ಸಹ ಮನುಷ್ಯರೇ ಆಗಿರುವುದರಿಂದ ಅವರಲ್ಲಿ ಗುಣಗಳ ಪ್ರಭಾವವಿರುತ್ತದೆ. ಅಸೂಯೆ, ಆಸೆ ಎಂಬ ಎರಡು ಮನುಷ್ಯನಲ್ಲಿ ಬಲವಾದ ಗುಣಗಳು. ಮನುಷ್ಯನ ಜೀವನದಲ್ಲಿ ಹೆಚ್ಚುಕಾಲ ಈ ಎರಡು ಗುಣಗಳ ಕಾರಣದಿಂದಲೇ ಕೆಲಸಮಾಡುತ್ತಿರುತ್ತಾನೆ. ಕ್ರೈಸ್ತರಲ್ಲಿ ಸಹ ಅಸೂಯೆ ಇರುವುದರಿಂದ, ಅವರಿಗೆ ಮುಖ್ಯ ಆಧ್ಯಾತ್ಮಿಕ ವಿಷಯದಲ್ಲಿ ಅಸೂಯೆ ಗುಣ ಕೆಲಸಮಾಡುವುದರಿಂದ, ಅವರು ಎಲ್ಲೋ ಒಂದು ಕಡೆ, ಯಾವಾಗಲೋ ಒಂದುಬಾರಿ ತಮ್ಮಲ್ಲಿನ ದ್ವೇಷವನ್ನು, ಕ್ರೋಧದ ರೂಪದಲ್ಲಿ ತೋರಿಸುತ್ತಾರೆ. ಆದರೂ ಅವರು ಅವರ ಕ್ರಿಯೆಗಳನ್ನು ಪ್ರತ್ಯಕ್ಷವಾಗಿ ತೋರಿಸದೆ  ಪರೋಕ್ಷವಾಗಿ  ತೋರಿಸಬಲ್ಲರು.

ನಮ್ಮ ಅನುಭವದಲ್ಲಿರುವ ಸಂಘಟನೆಗಳನ್ನು ಅನುಸರಿಸಿ ಅವರದು ಹೇಗೆ ಕಾಣಿಸದ ಉಗ್ರವಾದವೋ ಚೆನ್ನಾಗಿ ತಿಳಿಯುತ್ತಿದೆ. ಬಹಳಜನ ಕ್ರೈಸ್ತರು ಹಿಂದೂಗಳಿಂದ ಕ್ರೈಸ್ತಮತದೊಳಗೆ ಹೋದವರೇ! ಬಹಳಜನ ಎನ್ನದೇ ಈಗ ಕ್ರೈಸ್ತರಲ್ಲಿ ಇರುವವರೆಲ್ಲಾ ಒಂದುಕಾಲದಲ್ಲಿ ಹಿಂದೂಗಳಾಗಿ ಇರುತ್ತಿದ್ದರೆಂದು ಹೇಳಬಹುದು. ಸ್ಮಶಾನದಲ್ಲಿ ಕಾವಲಿರುವವರನ್ನು ಕೂಡಿನ ಕಾವಲುಗಾರರು ಎನ್ನುತ್ತೇವೆ. ಕೆಳಗೆ ಕಾಡಿನ ಕಾವಲುಗಾರ ಎಂದರೇ 'ಮಾದಿಗ' ಕುಲದವರಿರುತ್ತಾರೆ.

ಅದು ಅವರ ಕುಲವೃತ್ತಿಯಾಗಿ ಇರುತ್ತದೆ. ಒಂದು ಊರಿಗೆ ಒಂದು ಕುಟುಂಬವೇ ವಂಶ ಪಾರಂಪರ್ಯವಾಗಿ ಆ ಕೆಲಸವನ್ನು ಮಾಡುತ್ತಿರುತ್ತಾರೆ. ಆ ಕಾವಲುಗಾರರ ಕುಟುಂಬದಲ್ಲಿನ ಒಬ್ಬವ್ಯಕ್ತಿ ಕ್ರೈಸ್ತವ ಮತದಲ್ಲಿ ಸೇರುವುದು ನಡೆದಿದೆ. ಅಂದಿನಿಂದ ಕ್ರೈಸ್ತವನಾಗಿಯೇ ಇದ್ದೂ ಕ್ರೈಸ್ತಮತ ಕಟ್ಟುಪಾಡುಗಳಿಗೆ ಚೆನ್ನಾಗಿ ಅಭ್ಯಾಸ ವಾಗಿದ್ದಾನೆ. ಕ್ರೈಸ್ತವ ಮತದಲ್ಲಿನ ಜ್ಞಾನವನ್ನು ತಿಳಿದುಕೊಳ್ಳದಿದ್ದರೂ, ಆ ಮತದಲ್ಲಿರುವ ಉಳಿದ ಅನರ್ಥಗಳೆಲ್ಲವನ್ನೂ ಕಲಿತುಕೊಂಡಿದ್ದಾನೆ. ಕ್ರೈಸ್ತವ ಮತದಲ್ಲಿ ಏನು ಅನರ್ಥಗಳಿರುತ್ತವೆ ಎಂದು ಕೆಲವರಿಗೆ ಅನುಮಾನ ಬರಬಹುದು. ಆ ಮತದಲ್ಲಾಗಲೀ, ಉಳಿದ ಯಾವ ಮತದಲ್ಲಾಗಲೀ ಜ್ಞಾನ ಹೊರತು ಉಳಿದ ಮತ ಸಂಬಂಧವಾದ ಕಾರ್ಯಗಳೆಲ್ಲವೂ ಅನರ್ಥಗಳೇ. ಯಾವ ಮತದಲ್ಲಾದರೂ, ದೈವಜ್ಞಾನವೇ ನಿಜವಾದ ಅರ್ಥ. ಅರ್ಥ ಎಂದರೇ ಧನವೆಂದು ಸಹ ವಿವರವಿದೆ. ಕ್ರೈಸ್ತವ ಮತದೊಳಗೆ ಹೋಗಿ ಅದರಲ್ಲಿನ ಮತಪ್ರಚಾರವೇ ದೇವರ ಸೇವೆ ಎಂದುಕೊಂಡಿದ್ದಾನೆ.

ಮತಪ್ರಚಾರವನ್ನು ಬೋಧಕರೇ ಮಾಡಬೇಕೆಂಬ ನಿಯಮವಿಲ್ಲ. ಯಾರಾದರೂ ತಮ್ಮ ಕೈಲಾದಷ್ಟು, ಸಾಧ್ಯವಾದಷ್ಟು ಮಾಡಬಹುದೆಂದು ಮೊದಲೇ ಅವರ ಹಿರಿಯರು ಹೇಳುವುದರಿಂದ ಅದೇ ಕೆಲಸವನ್ನು ಮಾಡಬೇಕೆಂದು ನಿರ್ಣಯಿಸಿಕೊಂಡಿದ್ದಾನೆ. ಹಿಂದೂ ಮತದಿಂದ ಕ್ರೈಸ್ತಮತದೊಳಗೆ ಹೋದವರು ತಪ್ಪದೇ ಹೆಸರು ಬದಲಾಯಿಸಿಕೊಳ್ಳಬೇಕಾಗಿರುತ್ತದೆ. ಅಲ್ಲಿಯವರೆಗು ಹಿಂದೂ ಮತದಲ್ಲಿರುವ ಹೆಸರನ್ನು ಬಿಟ್ಟು ಅಂದಿನಿಂದ ಕ್ರೈಸ್ತವ ಬೋಧಕರು ಇಟ್ಟ ಹೆಸರಿನಿಂದ ಚಲಾವಣೆ ಆಗಬೇಕಾಗಿದೆ. ಕೂಡಿನ ಕಾವಲುಗಾರನ ಕುಟುಂಬದಿಂದ ಕ್ರೈಸ್ತನಾಗಿ ಬದಲಾದ ಆ ವ್ಯಕ್ತಿಗೆ ಬಾಪ್ತಿಸ್ಮ ಕೊಟ್ಟ ಬೋಧಕರು ಏನು ಹೆಸರಿಟ್ಟಿದ್ದಾರೋ ತಿಳಿದಿಲ್ಲ. ಆದರೇ ಇಲ್ಲಿ ಗುರುತಿಗಾಗಿ ನಾವು ಆತನನ್ನು ಪ್ರಭುದಾಸ್ ಎಂದು ಹೆಸರಿಟ್ಟುಕೊಳ್ಳೋಣ. ಪ್ರಭುದಾಸ್ ಕ್ರೈಸ್ತನಾಗಿ ಬದಲಾದರೂ ಕ್ರೈಸ್ತರಲ್ಲಿ ಇಟ್ಟಿರುವ ಹೆಸರಿನಿಂದ ಆತನು ಯಾವಾಗಲೂ ಕರೆಯಿಸಿಕೊಳ್ಳಲಿಲ್ಲ. ಆತನು ಉದ್ದೇಶಪೂರರ್ವಕವಾಗಿಯೇ ಆ ಹೆಸರಿನಿಂದ ಚಲಾವಣೆ ಆಗಲಿಲ್ಲ.

ಆ ಹೆಸರಿನಿಂದ ಕರೆಯಲ್ಪಟ್ಟರೇ ತಾನು ಕ್ರೈಸ್ತನೆಂದು ಎಲ್ಲರಿಗೂ ತಿಳಿದುಹೋಗುತ್ತದೆ ಎಂದು, ಹಾಗೆ ತಿಳಿಯದೇ ಇರಬೇಕೆಂದುಕೊಂಡನು. ಆತನದ್ದು ನಲ್ಗೊಂಡಾ ಜಿಲ್ಲೆಯಲ್ಲಿ ಒಂದು ಗ್ರಾಮ. ತನ್ನ ಗ್ರಾಮಕ್ಕೆ ಹೋದಾಗ ಮಾತ್ರವೇ ತನ್ನ ಊರಿನಲ್ಲಿನ ಚರ್ಚಿಗೆ ಹೋಗಿ, ಕ್ರೈಸ್ತನಾಗಿ ಪ್ರಾರ್ಥನೆ ಮಾಡುವ ಪ್ರಭುದಾಸ್ ಉಳಿದ ಕಾಲವೆಲ್ಲವೂ ಹೈದರಾಬಾದ್ ನಗರದಲ್ಲಿಯೇ ಕಳೆಯುತ್ತಿದ್ದನು. ತಾನು ಟೀ.ವೀ9 ಛಾನಲ್‌ನಲ್ಲಿ ವಿಲೇಖರಿಯಾಗಿ (ಪತ್ರಕರ್ತನಾಗಿ)ಕೆಲಸ ಮಾಡುತ್ತಿದ್ದನು. ಹಾಗೆ ಮನುಷ್ಯರ ಮಧ್ಯದಲ್ಲಿ ಹೆಚ್ಚಾಗಿದ್ದ ಪ್ರಭುದಾಸ್ ತನ್ನ ಹೆಸರನ್ನು ಹೇಳದೆ ಗಿರಿಧರ್ ಎಂಬ ಹಿಂದೂ ಹೆಸರಿನಿಂದ ಚಲಾವಣೆ ಆಗುತ್ತಿದ್ದನು. ಹಾಗೆ ತನ್ನ ಹೆಸರು ಗಿರಿಧರ್ ಎಂದು ಹೇಳಿಕೊಳ್ಳುತ್ತಾ, ಎಲ್ಲರ ದೃಷ್ಠಿಯಲ್ಲಿ ಹಿಂದೂವಾಗಿ ಕಾಣಿಸುತ್ತಾ, ಹಿಂದೂ ಮತರಕ್ಷಣೆ ಸಂಸ್ಥೆಗಳಾದ “ವಿಶ್ವಹಿಂದೂ ಪರಿಷತ್” ಆರ್.ಯಸ್.ಯಸ್ ಮತ್ತು ಬಿ.ಜೆ.ಪಿ ನಾಯಕರೊಂದಿಗೆ ಬೆರೆತು ಪುನಃ ಹಿಂದೂತ್ವವನ್ನು ಕುರಿತು ದೊಡ್ಡದಾಗಿ ಮಾತನಾಡುತ್ತಿದ್ದನು. ರಾಜಕೀಯ ಪಾರ್ಟಿ ಆದ ಬಿ.ಜೆ.ಪಿ ಯೊಂದಿಗೆ ಸ್ನೇಹವಾಗಿದ್ದೂ, ವಿಶ್ವಹಿಂದೂ ಪರಿಷತ್ ಅವರಬಳಿ ಒಳ್ಳೆಯ ಹಿಂದೂವಾಗಿ ಹೆಸರುಗಳಿಸಿದನು.

**ಪ್ರಶ್ನೆ :– ಮೊದಲು ಹಿಂದೂವಾಗಿ ಇದ್ದವನು ಕ್ರೈಸ್ತನಾಗಿ ಬದಲಾದ ನಂತರ ಕ್ರೈಸ್ತನಾಗಿ ಇರುತ್ತಾನೆ ಹೊರತು, ಹಿಂದೂವಾಗಿ ಯಾರೂ ಇರಬೇಕೆಂದು ಅಂದುಕೊಳ್ಳುವುದಿಲ್ಲ. ಆದರೇ ಅದಕ್ಕೆ ಭಿನ್ನವಾಗಿ ನೀವು ಹೇಳುತ್ತಿದ್ದೀರ. ಕ್ರೈಸ್ತರೊಳಗೆ ಹೋದ ನಂತರ ಅದನ್ನೇ ಸಮರ್ಥಿಸುತ್ತಾರೆ ಹೊರತು, ಹಿಂದೂಗಳಕಡೆ ಯಾರೂ ಹೋಗುವುದಿಲ್ಲ. ನೀವು ಹೇಳುವುದು ಸತ್ಯವಾಗಿಲ್ಲ, ಒಂದು ಕಥೆಯಂತಿದೆ.**

**ಉತ್ತರ :–** ನಾವು ನಡೆದ, ನಡೆಯುತ್ತಿರುವ ಸತ್ಯವನ್ನೇ ಹೇಳುತ್ತಿದ್ದೇವೆ. ಇದರಲ್ಲಿ ಸ್ವಲ್ಪವು ಸಹ ಅಸತ್ಯವಿಲ್ಲ.

**ಪ್ರಶ್ನೆ :– ಆದರೇ ಪ್ರಭುದಾಸ್‌ಆಗಿ ಹೆಸರು ಬದಲಾಯಿಸಿಕೊಂಡವನು ಗಿರಿಧರ್ ಆಗಿ ಕರೆಯಿಸಿಕೊಳ್ಳುವುದೇನು? ಹಿಂದೂಗಳಲ್ಲಿ ಬೆರೆತು ಹೋಗಿ ಒಳ್ಳೆಯ**

**ಹಿಂದೂವಾಗಿ ಹೆಸರು ತಂದುಕೊಳ್ಳುವುದು ಏನು? ಹಾಗಿರುವಾಗ ಆತನು ಹಿಂದೂವೇ ಆಗುತ್ತಾನೆ ಹೊರತು ಕ್ರೈಸ್ತನಲ್ಲ ಅಲ್ಲವೇ!**

**ಉತ್ತರ :–** ಅಂಥವನನ್ನು ಯಾರಾದರೂ ಹಿಂದೂವೇ ಎನ್ನುತ್ತಾರೆ ಹೊರತು, ಕ್ರೈಸ್ತನೆನ್ನುವುದಿಲ್ಲ. ಆತನ ಉದ್ದೇಶವು ಸಹ ತನ್ನನ್ನು ಯಾರೂ ಕ್ರೈಸ್ತನೆಂದು ಅಂದುಕೊಳ್ಳಬಾರದೆಂದೂ, ಎಲ್ಲರೂ ತನ್ನನ್ನು ಹಿಂದೂವಾಗಿಯೇ ಲೆಕ್ಕಿಸಬೇಕೆಂದು ಅಂದುಕೊಳ್ಳುತ್ತಿದ್ದನು. ತಾನು ಹಿಂದೂ ಎಂದು ಎಲ್ಲರೂ ಅಂದುಕೊಳ್ಳುವಹಾಗೆ ಮುಖದ ಮೇಲೆ ಯಾವಾಗಲೂ ಕುಂಕುಮ ಬೊಟ್ಟು ಇಟ್ಟುಕೊಳ್ಳುತ್ತಿದ್ದನು. ಆತನನ್ನು ನೋಡಿದವರೆಲ್ಲರೂ ಆತನನ್ನು ಸ್ವಚ್ಛವಾದ ಹಿಂದೂವೇ ಎಂದು ಅಂದುಕೊಳ್ಳುತ್ತಿದ್ದರು. ಆತನು ಗಿರಿಧರನ ಹೆಸರಿನಿಂದ ಚಲಾವಣೆ ಆದರೂ, ಬೊಟ್ಟು ಇಟ್ಟುಕೊಂಡು ತಿರುಗಿದರೂ, ಹಿಂದೂ ನಾಯಕರಿಗೆ ಹತ್ತಿರವಾಗಿದ್ದರೂ, ಕೊನೆಗೆ ಎಲ್ಲರೂ ಆತನನ್ನು ಹಿಂದೂವೇ ಎಂದು ನಂಬಿದರೂ, ನಾವು ಮಾತ್ರ ಆತನನ್ನು ಹಿಂದೂವೆಂದು ನಂಬಲಿಲ್ಲ. ಹಸುವಿನ ಚರ್ಮ ಹೊದ್ದುಕೊಂಡ ಹುಲಿಹಾಗೆಯೇ ಲೆಕ್ಕಿಸಿದ್ದೇವೆ.

**ಪ್ರಶ್ನೆ :– ಎಲ್ಲ ವಿಧಗಳಾಗಿ ಹಿಂದೂವಾಗಿರುವಾಗ ನೀವು ಯಾಕೆ ಆತನನ್ನು ಅನುಮಾನ ದೃಷ್ಟಿಯಿಂದ ನೋಡುತ್ತಿದ್ದೀರಿ?**

**ಉತ್ತರ :–** ಮೊದಲು ಕ್ರೈಸ್ತನಾಗಿ ಬದಲಾದ ಆತನು, ನಂತರ ಹೈದರಾಬಾದ್‌ನಲ್ಲಿ ಎಲ್ಲರ ಮಧ್ಯ ಹಿಂದೂವಾಗಿ ಚಲಾವಣೆ ಆಗುವ ಗಿರಿಧರ್ ಎಂಬ ವ್ಯಕ್ತಿ, ತನ್ನ ಸ್ವಂತ ಗ್ರಾಮಕ್ಕೆ ಹೋದಾಗ ಮಾತ್ರ ಚರ್ಚಿಗೆ ಹೋಗಿ ಪ್ರಾರ್ಥನೆಗಳು ಮಾಡಿ ಬರುವುದು ನಡೆಯುತ್ತಿತ್ತು. ತನ್ನ ಊರಲ್ಲಿ ಇರುವಷ್ಟುಕಾಲ ಮುಖಕ್ಕೆ ಬೊಟ್ಟು ಇಟ್ಟುಕೊಳ್ಳುವುದಿಲ್ಲ. ಪ್ರಭುದಾಸ್‌ಆಗಿಯೇ ಕರೆಯಿಸಿಕೊಳ್ಳುತ್ತಿದ್ದನು. ಪೂರ್ತಿ ಕ್ರೈಸ್ತನಾಗಿಯೇ ಇರುತ್ತಾನೆ. ಅಲ್ಲಿಂದ ಹೈದರಾಬಾದ್‌ಗೆ ಬಂದ ನಂತರ ಮುಖಕ್ಕೆ ಬೊಟ್ಟಿಟ್ಟುಕೊಳ್ಳುವುದು, ಗಿರಿಧರ್‌ಆಗಿ ಕರೆಯಿಸಿಕೊಳ್ಳುವುದು, ಪೂರ್ತಿ ಹಿಂದೂವಾಗಿ ಇರುವಂತೆ ಚಲಾವಣೆ ಆಗುವುದು ನಡೆಯುತ್ತಿತ್ತು. ಅಷ್ಟೇಅಲ್ಲದೆ

ಹಿಂದೂರಕ್ಷಣೆ ಸಂಘಗಳೊಂದಿಗೆ ಬೆರೆತು ಹಿಂದೂಗಳ ಸಲುವಾಗಿ ಮಾತನಾಡುವುದು, ತಾನು ಮಾಡುವ ವಿಲೇಖರಿ (ಪತ್ರಕರ್ತನ) ಕೆಲಸದಲ್ಲಿ ಸಹ ಹಿಂದೂಗಳನ್ನು ಗೌರವಿಸುವಂತೆ ಇರುವುದು ನಡೆಯುತ್ತಿದೆ. ವಾಸ್ತವವಾಗಿ ಆತನೊಬ್ಬ ಕ್ರೈಸ್ತನಾಗಿದ್ದು ಹಾಗೆ ನಟಿಸುವುದರಿಂದ ಆತನ ಮೇಲೆ ನಮಗೆ ಅನುಮಾನ ಏರ್ಪಟ್ಟಿದೆ.

**ಪ್ರಶ್ನೆ :– ಗಿರಿಧರ್ ಎಂಬ ವ್ಯಕ್ತಿ ಒಬ್ಬ ಕ್ರೈಸ್ತನೆಂದು, ಹೆಸರು ಪ್ರಭುದಾಸ್ ಎಂದೂ, ಆತನು ಗ್ರಾಮಕ್ಕೆ ಹೋದರೇ ಚರ್ಚಿಗೆ ಹೋಗುತ್ತಾನೆಂದು ನಿಮಗೆ ಹೇಗೆ ತಿಳಿಯಿತು?**

**ಉತ್ತರ :–** ಒಂದು ಸಂಘಟನೆ ನಡೆಯುವವರೆಗು ನಾವು ಸಹ ಆತನನ್ನು ಹಿಂದೂವೆಂದೇ ನಂಬಿದ್ದೆವು. ನಮ್ಮ ಅನುಭವದಲ್ಲಿ ನಡೆದ ಸಂಘಟನೆ ಮೂಲಕ ನಾವು ಸ್ವಲ್ಪ ಆಲೋಚಿಸಬೇಕಾಗಿ ಬಂದಿದೆ. ಆಗ ಆತನ ಕುತಂತ್ರ ಹೊರಬಿದ್ದಿದೆ. ಆತನಲ್ಲಿನ ದುರುದ್ದೇಶ ತಿಳಿದುಹೋಯಿತು.

**ಪ್ರಶ್ನೆ :– ಆತನಿಂದ ನಿಮಗೆ ಏನು ಸಂಘಟನೆ ನಡೆದಿದೆ? ಆತನ ಮೇಲೆ ಏನು ಅನುಮಾನ ಬಂದಿದೆ?**

**ಉತ್ತರ :–** 2004ನೇ ವರ್ಷ ಬಹುಶಾ ಮೇ ತಿಂಗಳಲ್ಲಿ ಎಂದುಕೊಳ್ಳುತ್ತೇನೆ. ನಮ್ಮ ಶಿಷ್ಯರು ಕೆಲವರು ಯುಗಾದಿಯಿಂದ ಪ್ರಾರಂಭವಾದ ಕ್ಯಾಲೆಂಡರ್‌ನ್ನು, ನಾವು ಪ್ರತ್ಯೇಕವಾಗಿ ಮುದ್ರಿಸಿ ಕ್ಯಾಲೆಂಡರನ್ನು ಅಲ್ಲಲ್ಲಿ ಉಚಿತವಾಗಿ ಕೊಡುತ್ತಿದ್ದರು. ಜನವರಿಯಿಂದ ಪ್ರಾರಂಭವಾಗುವ ಕ್ಯಾಲೆಂಡರು ಕ್ರೈಸ್ತರದೆಂದು, ಯುಗಾದಿಯಿಂದ ಪ್ರಾರಂಭವಾಗುವ ಕ್ಯಾಲೆಂಡರು ಹಿಂದೂಗಳದೆಂದು ಹೇಳಿ ಅಲ್ಲಲ್ಲಿ ಕೊಡುತ್ತಿದ್ದೆವು. ನಮ್ಮ ಶಿಷ್ಯರಿಗೆ ಮಹಾನಂದಿಯಲ್ಲಿ ಬಂಧುಗಳಿದ್ದುದರಿಂದ ಅಲ್ಲಿಗೆ ಹೋಗಿ ಕೆಲವು ಕ್ಯಾಲೆಂಡರ್‌ಗಳು ಕೊಡುವುದು ನಡೆದಿದೆ. ನಾವು ಮಾಡುತ್ತಿರುವುದು ಒಳ್ಳೆಯ ಕೆಲಸವೇ ಆದರೂ, ಹಿಂದೂ ಸಂಸ್ಕೃತಿಗೆ ಬಲವನ್ನು ಕೈಗೂಡಿಸುವ ಯುಗಾದಿ ಪ್ರಾರಂಭ ಕ್ಯಾಲೆಂಡರು ಕೊಡುತ್ತಿದ್ದರೂ, ಅಲ್ಲಿನ ದೇವಸ್ಥಾನದವರು ನಮ್ಮೊಂದಿಗೆ ಘರ್ಷಣೆಗೆ ಇಳಿಯುವುದು, ನೀವು ಅನ್ಯಮತವನ್ನು ಪ್ರಚಾರ

ಮಾಡುತ್ತಿದ್ದೀರೆಂದು ಆರೋಪಿಸುವುದು ನಡೆದಿದೆ. ಅಲ್ಲಿನವರು ಘರ್ಷಣೆಬಿದ್ದಾಗ, ನಮ್ಮವರು ಎಷ್ಟು ಸಮಾಧಾನ ಹೇಳಿದರೂ, ವಿವರಿಸಿ ಹೇಳಿದರೂ ನಮಗೆ ಗೊತ್ತು ನೀವು ಹಿಂದೂಗಳ ಮುಸುಗಿನಲ್ಲಿರುವ ಕ್ರೈಸ್ತರೆಂದು ಅವರನ್ನುವುದು ನಡೆದಿದೆ. ಅಲ್ಲಿ ಘರ್ಷಣೆ ವಾತಾವರಣವನ್ನು ಸೃಷ್ಠಿಸಿರುವುದು ಟೀ.ವೀ.9 ಪತ್ರಕರ್ತರೆ, ಪತ್ರಕರ್ತರು ಅಲ್ಲಿಗೆ ಬಂದು "ಕ್ರೈಸ್ತರು ಬಂದು ಆಲಯದ ಮುಂದೆ ಅವರ ಮತಪ್ರಚಾರ ಮಾಡುತ್ತಿದ್ದಾರೆ, ಕರಪತ್ರಗಳು ಕೊಡುತ್ತಿದ್ದಾರೆಂದು" ದೇವಸ್ಥಾನದವರನ್ನು ರೊಚ್ಚಿಗೆಬ್ಬಿಸುವುದು ನಡೆದಿದೆ. ಆ ವಿಷಯವಾಗಿ ಎಲ್ಲರೂ ಸ್ಪಂದಿಸಿ ದೊಡ್ಡ ವಾರ್ತೆಯಾಗಿ ಟೀ.ವೀ.9 ನಲ್ಲಿ ಹೇಳುವುದು ನಡೆಯಿತು. ಇದೆಲ್ಲವೂ ಹೈದರಾಬಾದ್‌ನಲ್ಲಿರುವ ಗಿರಿಧರ್‌ನಿಂದಲೇ ನಡೆದಿದೆಯೆಂದು ನಮಗೆ ತಿಳಿಯುವುದು ತಿಳಿಯಿತು.

ಆಗಾಗಲೇ ಆರುತಿಂಗಳಿಂದ ಗಿರಿಧರ್ ನಮ್ಮಬಳಿಗೆ ಬರುವುದು, ನಮ್ಮ ಜ್ಞಾನವನ್ನು ಚೆನ್ನಾಗಿ ಅರ್ಥಮಾಡಿಕೊಂಡಂತೆ ಹೇಳುವುದು ನಡೆಯುತ್ತಿತ್ತು. ಎಲ್ಲಿ ನಮ್ಮ ಬೋಧನೆಗಳು ನಡೆಯುತ್ತಿದ್ದರೂ ಅವುಗಳಲ್ಲಿ ಪಾಲ್ಗೊಳ್ಳುತ್ತಿದ್ದನು. ಆತನು ಎಲ್ಲರಹಾಗೆ ಜ್ಞಾನವನ್ನು ತಿಳಿದುಕೊಳ್ಳುತ್ತಿದ್ದಾನೆಂದು ಅಂದುಕೊಳ್ಳುತ್ತಿದ್ದೆವು. ಆದರೇ ಮಹಾನಂದಿ ಸಂಘಟನೆಯ ನಂತರ ಆತನನ್ನು ಕುರಿತು ಸ್ವಲ್ಪ ಹೊಸ ಸಮಾಚಾರ ತಿಳಿಯಿತು. ಆತನು ಕ್ರೈಸ್ತನಾಗಿ ಸೇರಿದ ನಂತರ ಪೂರ್ತಿಯಾಗಿ ಯೇಸು ಸೇವೆ ಮಾಡುತ್ತೇನೆಂದು, ಕ್ರೈಸ್ತವ ಮತವನ್ನು ವಿಸ್ತಾರಗೊಳಿಸುತ್ತೇನೆಂದು ಪ್ರಮಾಣ ಮಾಡುವುದು ನಡೆದಿದೆ. ಹೊರಗೆ ಶಾಂತ ಸ್ವಭಾವಿಗಳಾಗಿ ಕಾಣಿಸುವ ಕ್ರೈಸ್ತರಲ್ಲಿ ಮತ್ತೊಂದು ಕೋನದಿಂದ ನೋಡಿದರೇ, ಕೆಲವರು ಮಾತ್ರ ಹೊರಗೆ ಕಾಣಿಸದೇ ಮತಪ್ರಚಾರ ಮಾಡಬೇಕೆಂದು ನಿರ್ಣಯಿಸಿಕೊಂಡಂತೆ ತಿಳಿಯುತ್ತಿದೆ. ತಮ್ಮ ಮತವನ್ನು ವಿಸ್ತಾರಗೊಳಿಸುವುದಕ್ಕೆ ಹಿಂದೂ ಮತದಲ್ಲಿರುವ ಗುರುಗಳೇ ಆತಂಕವೆಂದು, ಅವರು ಜ್ಞಾನವನ್ನು ಬೋಧಿಸದೆ ಹೋದರೇ ಹಿಂದೂಗಳೆಲ್ಲರನ್ನು ಆಕರ್ಷಿಸಬಹುದೆಂದು ಅಂದುಕೊಂಡರು. ಎಲ್ಲಾದರೂ ಹಿಂದೂ ಜ್ಞಾನ ಚೆನ್ನಾಗಿ ಹೇಳುವವರಿದ್ದಾರೆಂದರೇ, ಅಲ್ಲಿ ಆ ಗುರುಗಳನ್ನು ಜ್ಞಾನ ಹೇಳದಂತೆ

ಮಾಡಬೇಕೆಂದು, ಆ ಗುರುಗಳ ಬಳಿಗೆ ಯಾರೂ ಹೋಗದೇ ಮಾಡಬೇಕೆಂಬ ಸಂಚನ್ನು ಅವರು ಮೊದಲೇ ನಿರ್ಣಯಿಸಿಕೊಂಡಿದ್ದಾರೆ. ಆ ಕೆಲಸಗಳನ್ನು ಪ್ರತ್ಯಕ್ಷ ಶತ್ರುಗಳಾಗಿದ್ದು ಮಾಡುವುದಕ್ಕೆ ಕಷ್ಟವೆಂದು ತಿಳಿದು, ಕಾಣಿಸದ ಶತ್ರುವಿನಹಾಗೆ ಅನುಕೂಲವಾಗಿದ್ದೂ ತಮ್ಮ ಕೆಲಸ ಮಾಡಬೇಕೆಂದುಕೊಂಡಿದ್ದಾರೆ. ಅಂದಿನಿಂದ ಕ್ರೈಸ್ತರ ಮತದಲ್ಲಿ ಚುರುಕಾದ ಯುವಕರು ಹೊರಗೆ ತಿಳಿಯದೇ ತಾವು ಹಿಂದೂಗಳಹಾಗೆ ಇದ್ದೂ, ಹಿಂದೂಗಳ ಆಯುವು ವಜ್ರಾಯುಧದಂತಹ ಗುರುಗಳಮೇಲೆ ಹಲ್ಲೆ ನಡೆಸಿದರೆ ಹಿಂದೂ ಮತವು ಸುಲಭವಾಗಿ ಕ್ರೈಸ್ತರಾಗಿ ಬದಲಾಗಿಹೋಗಬಲ್ಲರೆಂದು ಅಂದುಕೊಂಡಿದ್ದಾರೆ. ಈದಿನ ಬಹಳಕಡೆ ಆ ವಿಧವಾಗಿಯೇ ಪ್ರವರ್ತಿಸುತ್ತಿದ್ದಾರೆ.

ಹಾಗೆ ಹಿಂದೂಗಳಾಗಿ ಪ್ರವರ್ತಿಸಿ ಹಿಂದೂಗಳಲ್ಲಿಯೇ ಜಗಳವಿಟ್ಟು, ಹಿಂದೂಗಳಿಂದಲೇ ಹಿಂದೂ ಗುರುಗಳನ್ನು ಅವಮಾನಪಡಿಸಿ, ಗುರುಗಳನ್ನು ಪ್ರಜೆಗಳಿಗೆ ಜ್ಞಾನ ಹೇಳದಂತೆ ಮಾಡುವುದು, ಗುರುಹತ್ತಿರಕ್ಕೆ ಯಾರನ್ನೂ ಹೋಗದಂತೆ ಮಾಡುವುದು ಮುಖ್ಯವಾದ ಕೆಲಸವಾಗಿ ಇಟ್ಟುಕೊಂಡಿದ್ದಾರೆ. ಅಂತಹ ಕಾರ್ಯವನ್ನು ನಿರ್ವಹಿಸುವುದಕ್ಕೆ ಪ್ರಭುದಾಸ್ ಹೈದರಾಬಾದ್ ನಗರದಲ್ಲಿ ಗಿರಿಧರ್‌ಆಗಿ ಹೆಸರು ಬದಲಾಯಿಸಿಕೊಂಡು, ಹಿಂದೂವಾಗಿ ಚಲಾವಣೆಯಾ ಗುತ್ತಾ, ನಮ್ಮ ಬಳಿ ದುರುದ್ದೇಶದಿಂದ ಬರುವುದು ನಡೆದಿದೆ. ಬಂದವನು ನಮ್ಮನ್ನು ಎಲ್ಲ ವಿಷಯಗಳಲ್ಲಿ ಗಮನಿಸುತ್ತಾ, ಏನೂ ತಿಳಿಯದವನಹಾಗೆ ಜ್ಞಾನ ತಿಳಿದುಕೊಳ್ಳುವವನಹಾಗೆ ಬಂದೂಹೋಗುತ್ತಾ ಇದ್ದನು. ನಮ್ಮ ಶಿಷ್ಯರು ಮಹಾನಂದಿಗೆ ಹೋಗುತ್ತಿದ್ದಹಾಗೆ, ಅಲ್ಲಿ ಯುಗಾದಿಯಿಂದ ಪ್ರಾರಂಭವಾದ ಕ್ಯಾಲೆಂಡರುಗಳು ಉಚಿತವಾಗಿ ಕೊಡಬೇಕೆಂದುಕೊಂಡ ವಿಷಯವು ನಮ್ಮ ಮಾತುಗಳ ಮೂಲಕ ಗಿರಿಧರ್ ತಿಳಿದುಕೊಂಡು ಮಹಾನಂದಿಯಲ್ಲಿರುವ ಟೀ.ವೀ.9 ಪತ್ರಕರ್ತರಿಗೆ ಕ್ರೈಸ್ತರು ಬಂದು ಅವರ ಮತ ಪ್ರಚಾರ ನಿಮಿತ್ತ ಕರಪತ್ರಗಳು, ಕ್ಯಾಲೆಂಡರುಗಳು ಕೊಡುತ್ತಿರುವಹಾಗೆ ಹೇಳಿದ್ದಾನೆ. ಆ ವಿಷಯವನ್ನು ದೇವಸ್ಥಾನದವರಿಗೆ ತಿಳಿಸಿ, ಆ ವಾರ್ತೆಯನ್ನು ಸಹ ನ್ಯೂಸ್ ಸೆಂಟರ್‌ಗೆ

ಕೊಡಲು ಹೇಳಿದ್ದಾನೆ. ಹೈದರಾಬಾದ್‌ನಿಂದ ಟೀ.ವೀ.9 ಇನ್‌ಚಾರ್ಜ್ ಪರ್ತಕರ್ತನೆಂದು ಹೇಳುವುದರಿಂದ, ಅಲ್ಲಿನ ಪತ್ರಕರ್ತರು ದೇವಸ್ಥಾನದವರನ್ನು ರೊಚ್ಚಿಗೆಬ್ಬಿಸಿ ಘರ್ಷಣೆ ವಾತಾವರಣವನ್ನು ಸೃಷ್ಠಿಸಿದ್ದಾರೆ. ನಾವು ಏನು ಸಮಾಧಾನ ಹೇಳಿದರೂ, ಎಷ್ಟೋ ವಿವರವಾಗಿ ನಾವು ಹಿಂದೂಗಳೇ ಎಂದು ಹೇಳಿದರೂ, ಅವರು ಕೇಳಿಸಿಕೊಳ್ಳದೆ ನೀವು ಯಾರಾಗಿರುವುದು ನಮಗೆ ಗೊತ್ತು ಎಂದು ಹೇಳಿರುವುದರಿಂದ ಇವರಿಗೆ ಮೊದಲೇ ನಮ್ಮನ್ನು ಕುರಿತು ಒಂದು ನಿರ್ಣಯದಲ್ಲಿದ್ದಾರೆಂದು ಅರ್ಥವಾಯಿತು. ಅಲ್ಲಿಗೆ ಟೀ.ವೀ.9 ಪತ್ರಕರ್ತರು ಬಂದ ನಂತರವೇ ಘರ್ಷಣೆ ನಡೆಯುವುದೂ, ನಮಗೆ ನೀವು ಯಾರೆನ್ನುವುದು ತಿಳಿದಿದೆ ಎಂದು ಅವರು ಹೇಳುವುದು ನೋಡಿದರೇ, ಇದೇನೋ ಒಂದು ಸಂಚಿನ ಪ್ರಕಾರ ನಡೆದಿದೆಯೆಂದು ಅರ್ಥವಾಗಿಹೋಗಿದೆ. ಆ ವಿಷಯವನ್ನು ಕುರಿತು ಸ್ವಲ್ಪ ಆಳವಾಗಿ ಆಲೋಚಿಸಿದರೇ ನಾವು ಅಲ್ಲಿಗೆ ಹೋಗುವ ವಿಷಯ ಗಿರಿಧರ್‌ಗೆ ಹೊರತು ಇತರರಿಗೆ ತಿಳಿದಿಲ್ಲವೆಂದು, ನಡೆದಿರುವುದೆಲ್ಲಾ ಈತನ ಮೂಲಕವೇ ನಡೆದಿರಬಹುದೆಂದು ಸ್ವಲ್ಪ ಗ್ರಹಿಸಿದೆವು. ನಮ್ಮ ಅನುಮಾನ ಸ್ವಲ್ಪ ಮಹಾನಂದಿಯಲ್ಲಿ ವಿಚಾರಿಸಿದಾಗ, ನಮ್ಮನ್ನು ಕುರಿತು ಹೈದರಾಬಾದ್‌ನಿಂದ ಸಮಾಚಾರ ಬಂದಿದೆಯೆಂದು ತಿಳಿಯಿತು. ಆಗ ನಮ್ಮ ದೃಷ್ಠಿಯೆಲ್ಲವೂ ಗಿರಿಧರ್ ಮೇಲೆ ಹೋಯಿತು. ನಮಗೆ ನಲ್ಗೊಂಡ ಜಿಲ್ಲೆಯಲ್ಲಿ ಸಹ ಭಕ್ತರಿರುವುದರಿಂದ ಅವರ ಮೂಲಕ ಗಿರಿಧರ್ ಸ್ವಂತ ಊರು ಯಾವುದಾಗಿರುವುದು, ಆತನ ಸ್ವಂತ ಹೆಸರು ಏನಾಗಿರುವುದು ಎಲ್ಲ ವಿವರಗಳು ಶೇಕರಿಸಿದೆವು. ಅದಕ್ಕು ಮೊದಲೇ ಕಾಣಿಸದ ಉಗ್ರವಾದವು ಕ್ರೈಸ್ತರು ನಡೆಸುತ್ತಿರುವಂತೆ ಮೇಲ್ನೋಟಕ್ಕೆ ಎಷ್ಟೋ ಶಾಂತ ಸ್ವಭಾವದವರಾಗಿ ಕಾಣಿಸುತ್ತಾ ಒಳಗೆ ಇಂತಹ ಕುತಂತ್ರ ಮಾಡುತ್ತಿರುವಂತೆ ತಿಳಿದಿರುವುದರಿಂದ, ಪ್ರಭುದಾಸ್ ಗಿರಿಧರಾಗಿ ಇದ್ದೂ ಅದೇ ಕೆಲಸ ಮಾಡಿದ್ದಾನೆಂದು ನಮಗೆ ಅರ್ಥವಾಯಿತು.

ಅಂದಿನಿಂದ ಆ ವಿಷಯವನ್ನು ಹೊರಗೆ ಹೇಳದೇ ಆತನನ್ನು ನಮ್ಮಿಂದ, ನಮ್ಮ ಜ್ಞಾನದಿಂದ ದೂರವಾಗಿ ಇಡುವುದು ನಡೆದಿದೆ. ಆ ವಿಧವಾಗಿ ಸ್ವಲ್ಪ

ಕಾಲವಿರುವಾಗ ಸುಮಾರು ಆರು ವರ್ಷಗಳ ನಂತರ ನಮ್ಮ ಜೆರಾಕ್ಸ್ ಷಾಪಿನಲ್ಲಿ ಕೆಲಸಮಾಡುವ ಹುಡುಗನಮೇಲೆ ಕೆಲವರು ದಾಳಿಮಾಡಿ ಹೊಡೆಯುವುದು ನಡೆಯಿತು. ಯಾವ ಕಾರಣವಿಲ್ಲದೆ ಅನವಶ್ಯವಾಗಿ ಏಕೆ ದಾಳಿ ಮಾಡಿದ್ದೀರೆಂದು ನಮ್ಮ ಹುಡುಗ ಭಾಸ್ಕರ್‌ರೆಡ್ಡಿ ಅವರನ್ನು ಕೇಳಿದಾಗ ಕ್ರೈಸ್ತರು ಬರೆದಿರುವ ಒಂದು ಕರಪತ್ರವನ್ನು ತೋರಿಸಿ ನೀವು ಕರಪತ್ರಗಳ ಮೂಲಕ ಕ್ರೈಸ್ತವ ಪ್ರಚಾರ ಮಾಡುತ್ತಿರುವುದಕ್ಕೆ ಎಂದು ಹೇಳಿದರು. ಕರಪತ್ರವನ್ನು ಯಾರು ಬರೆದಿರುವುದು, ಯಾವ ಚರ್ಚಿನವರು ಬರೆದಿರುವುದು ಅದರಲ್ಲಿ ಅಡ್ರಸ್‌ನೊಂದಿಗೆ ಸಹ ಇರುವಾಗ, ಅದೇ ಕೆಲಸವಾಗಿ ಅದನ್ನು ನೆಪತೋರಿಸಿ ಹೊಡೆದಿದ್ದಾರೆಂದು ತಿಳಿಯಿತು. ಹೊಡೆದಿರುವುದು ಹಿಂದೂ ಪರಿಷತ್‌ನವರು, ಹಿಂದೂಪರಿಷತ್ ನವರಾದರೂ ನಿಷ್ಕಾರಣವಾಗಿ ಯಾವುದೋ ಕರಪತ್ರವನ್ನು ತೋರಿಸಿ, ನಮಗೆ ಸಂಬಂಧವಿಲ್ಲದ ವಿಷಯವನ್ನು ಹೇಳಿ ಹೊಡೆಯುವುದಕ್ಕೆ ಕಾರಣ, ಅವರಲ್ಲಿ ಮೊದಲೇ ದ್ವೇಷ ಬೆಳೆದಿದೆಯೆಂದು, ಅದನ್ನು ಯಾವುದೋ ನೆಪ ತೋರಿಸಿ ಆ ವಿಧವಾದ ದಾಳಿ ಮಾಡಿದ್ದಾರೆಂದು ಅರ್ಥವಾಯಿತು. ಕಾರಣವಿಲ್ಲದೇ ಹೊಡೆಯುವುದು ಅವರ ತಪ್ಪೇ ಆದರೂ, ಅವರು ಯಾವುದೋ ಒಳ್ಳೆಯ ಕೆಲಸ ಮಾಡಿದಂತೆ ಅಂದುಕೊಂಡರು. ಆ ಸಂಘಟನೆಗೆ ಸಹ ಕಾರಣ, ಗಿರಿಧರ್ ಎಂದು ನಮಗೆ ಅರ್ಥವಾಯಿತು. ನಾವು ಬಹಳ ಕಾಲದಿಂದ ಕ್ರೈಸ್ತಪ್ರಚಾರ ಮಾಡುತ್ತಿರುವಹಾಗೆ ಗಿರಿಧರ್ ಹಿಂದೂ ಪರಿಷತ್‌ರವರಿಗೆ ಹೇಳುವುದರಿಂದ, ಸತ್ಯಾಸತ್ಯಗಳನ್ನು ವಿಚಾರಿಸದೆ ಅವರು ಹೇಳಿರುವುದು ಸತ್ಯವೇ ಎಂದು ನಂಬಿದರು. ಗಿರಿಧರ್ ಹಿಂದೂವೇ ಎಂದು ನಂಬುವುದರಿಂದ, ಆತನು ಹೇಳಿರುವ ಮಾತು ನಿಜವೇ ಇರಬಹುದೆಂದು ನಂಬಿ, ನಮ್ಮ ಮೇಲೆ ದಾಳಿ ಮಾಡಬೇಕೆಂಬ ಉದ್ದೇಶದಿಂದ, ಯಾವುದೋ ಕರಪತ್ರವನ್ನು ನೆಪಕ್ಕೆ ತೋರಿಸಿ ದಾಳಿ ಮಾಡುವುದು ನಡೆಯಿತು.

ದಾಳಿ ಮಾಡಿರುವವರೆಲ್ಲರೂ ನಮಗೆ ಪರಿಚಯ ಇಲ್ಲದವರು. ನಾವು ಎಂದೂ ಅವರನ್ನು ನೋಡಲಿಲ್ಲ. ಸುಮಾರು 25ಜನ ಬಂದು ಒಬ್ಬ ವ್ಯಕ್ತಿಯನ್ನು

ಹೊಡೆದಿದ್ದಾರೆ. ಅಲ್ಲಿ ಇನ್ನೂ ಸ್ವಲ್ಪಜನ ಇರುತ್ತಾರೆಂದು ಗಿರಿಧರ್ ಹೇಳುವುದರಿಂದ, ಅಷ್ಟುಜನ ಬಂದಿದ್ದಾರೆ. ಬಂದವರು ಅಲ್ಲಿ ಇಲ್ಲದವರನ್ನು ಕುರಿತು ಅವರು ಇರುತ್ತಿದ್ದರಲ್ಲವೇ! ಎಂದು ಕೇಳಿರುವುದರಿಂದ, ಇಲ್ಲಿ ಯಾರಿರುವುದು ಅವರಿಗೆ ಯಾರೋ ಹೇಳಿ ಕಳುಹಿಸಿದ್ದಾರೆಂದು ಅರ್ಥವಾಯಿತು. ಪ್ರತಿದಿನ ಕೆಲವರು ನಮ್ಮವರು ಅಲ್ಲಿರುತ್ತಿದ್ದರು, ಆದಿನ ಆ ಸಮಯಕ್ಕೆ ಯಾರೂ ಇಲ್ಲದಿರುವುದರಿಂದ ಅವರು ಇಲ್ಲದವರನ್ನು ಕೇಳಿದರು. ಹಾಗೆ ಕೇಳಿರುವುದನ್ನು ಅನುಸರಿಸಿ ಅವರಿಗೆ ಮೊದಲೇ ಇತರರು ಹೇಳಿ ಕಳುಹಿಸಿದ್ದಾರೆಂದು ಅರ್ಥವಾಯಿತು. ರಾತ್ರಿ 8 ಗಂಟೆಗಳಿರುವಾಗ ದಾಳಿ ನಡೆದಾಗ ದಾಳಿ ಮಾಡಿದವರು ಎಲ್ಲರೂ ಎರಡನೆಯ ದಿನ ಪೋಲೀಸ್‌ರವರಿಗೆ ಸಿಕ್ಕಿಹೋದರು. ಸಿಕ್ಕಿಕೊಂಡವರು ಗಿರಿಧರ್ ಮೇಲೆ ಹೇಳದಿದ್ದರೂ, ನಮಗೆ ಆ ವಿಷಯವೆಲ್ಲಾ ಅರ್ಥವಾಯಿತು. ಮೊದಲನೆಯ ದಿನ ರಾತ್ರಿ 8 ಗಂಟೆಗೆ ಜೆರಾಕ್ಸ್ ಷಾಪಿನಲ್ಲಿ ನಮ್ಮ ಮನುಷ್ಯನನ್ನು ಹಿಂದೂಗಳು ಹೊಡೆದಾಗ, ಎರಡನೆಯದಿನ ರಾತ್ರಿ 9 ಗಂಟೆಗೆ ನಮಗೆ ತಿಳಿಯದ ಹಿಂದೂಗಳು ಗಿರಿಧರ್‌ನನ್ನು ಹೊಡೆದರು. ದೇವರು ಆ ವಿಧವಾಗಿ ಆತನಿಗೆ ಶಿಕ್ಷೆ ಹಾಕಿದ್ದಾನೆ. ಆತನನ್ನು ಯಾರೋ ದಾಳಿ ಮಾಡಿ ಹೊಡೆದಿದ್ದಾರೆಂಬ ವಿಷಯ ಸಹ ನಮಗೆ ನಂತರ ತಿಳಿಯಿತು. ದೇವರು ಆತನಿಗೆ ತಕ್ಕ ಶಿಕ್ಷೆ ಹಾಕಿದ್ದಾನೆಂದು ಅಂದುಕೊಂಡೆವು.

ನಮ್ಮ ಜೆರಾಕ್ಸ್ ಷಾಪಿನಲ್ಲಿ ಭಾಸ್ಕರ್‌ರೆಡ್ಡಿಯನ್ನು ಹೊಡೆದಿರುವುದಕ್ಕಿಂತಲೂ ಹತ್ತಪಟ್ಟು ಹೆಚ್ಚಾಗಿ ಗಿರಿಧರ್ ಏಟು ತಿಂದು ಬಿದ್ದುಹೋಗುವುದು ನಡೆದಿದೆ. ಆತನು ಆಸ್ಪತ್ರೆ ಪಾಲಾಗಿ ಹತ್ತುದಿನಗಳಿಗಾದರೂ ಹೊರಗೆ ಬರಲಿಲ್ಲ. ಅಂದಿನಿಂದ ಇಂದಿನವರೆಗು ಆತನು ನಮ್ಮ ಸಹವಾಸಕ್ಕೆ ಬರುತ್ತಿಲ್ಲ. ಆತನು ಏನು ಮಾಡಿದರೂ ನಾವು ತಿಳಿದುಕೊಳ್ಳುತ್ತೇವೆಂದು ಅಂದುಕೊಂಡನೇನೋ ಆದರೇ, ನಮ್ಮ ವಿಷಯಕ್ಕೆ ಆತನು ದೂರವಾಗಿದ್ದಾನೆಂದುಕೊಂಡೆವು. ಆತನು ದೂರವಾಗಿದ್ದರೂ ಆತನು ಮಾಡಿದ ಮಹಾನಂದಿ ಘಟನೆ, ಹೈದರಾಬಾದ್ ಘಟನೆ ಮೂಲಕ ಕ್ರೈಸ್ತರು ಹೀಗೆ ಕುತಂತ್ರದೊಂದಿಗೆ ತಮ್ಮಲ್ಲಿನ ಮತದ್ವೇಷವನ್ನು

ತೋರಿಸುತ್ತಿದ್ದಾರೆಂದು ತಿಳಿಯಿತು. ಕ್ರೈಸ್ತರಲ್ಲಿ ಎಷ್ಟು ಒಳ್ಳೆಯವರಿದ್ದರೂ, ಜೇಡಹುಳದಂತೆ ಇಂಥವರು ಕೆಲವರಿದ್ದಾರೆಂದು ತಿಳಿಯಿತು. ಅಂಥವರು ಹಿಂದೂಗಳಾಗಿ ಚಲಾವಣೆ ಆಗುತ್ತಾ ಹಿಂದೂಗಳ ಬೆರಳು ತೆಗೆದು ಹಿಂದೂಗಳ ಕಣ್ಣನ್ನೇಚುಚ್ಚಿದಂತೆ, ಹಿಂದೂ ಗುರುಗಳನ್ನು ಹಿಂದೂಗಳಿಂದಲೇ ಅವಮಾನ ಪಡಿಸುತ್ತಿದ್ದಾರೆ. ಹಿಂದೂ ಗುರುಗಳು ಇಲ್ಲದೇ ಹೋದರೇ ಹಿಂದೂಗಳು ಜ್ಞಾನವಿಲ್ಲದವರಾಗಿ ತಮ್ಮಬಳಿಗೆ ಬರುತ್ತಾರೆಂದು, ಅದರಿಂದ ಕ್ರೈಸ್ತಮತ ಅಭಿವೃದ್ಧಿ ಆಗಬಹುದೆಂದು ಅವರ ಭಾವನೆ.

ಕ್ರೈಸ್ತರು ಎಷ್ಟೋಜನ ಗಿರಿಧರ್ ಹಾಗೆ ಕುತಂತ್ರಗಳು ಮಾಡುತ್ತಾ ಹಿಂದೂಗಳನ್ನು ಹಿಂದೂಗಳ ಮೇಲಕ್ಕೆ ರೊಚ್ಚಿಗೆಬ್ಬಿಸುತ್ತಿದ್ದಾರೆ. ಇತರೆ ಮತಗಳ ಕುತಂತ್ರಗಳು ತಿಳಿಯದ ಹಿಂದೂ ನಾಯಕರು ಇತರರು ಹೇಳಿರುವ ಮಾತನ್ನು ಕೇಳಿ, ತಮ್ಮ ಪ್ರತಾಪವನ್ನು ಹಿಂದೂಗಳ ಮೇಲೆಯೇ ತೋರಿಸುತ್ತಿದ್ದಾರೆ. ಇಷ್ಟು ತಿಳುವಳಿಕೆಯಿಲ್ಲದವರಾಗಿ ಹಿಂದೂಗಳ ನಾಯಕರು ಪ್ರವರ್ತಿಸುವುದರಿಂದ, ಕ್ರೈಸ್ತರ ಕುತಂತ್ರಗಳು ಸುಲಭವಾಗಿ ಸಾಗುತ್ತಿವೆ. ಅವರ ಒಳಸಂಚು ನೆರವೇರುತ್ತಿದೆ. ಅದರಿಂದ ಹಿಂದೂಗಳಿಗೇ ನಷ್ಟ ಏರ್ಪಟ್ಟು ಹಿಂದೂ ಮತವು ಕ್ಷೀಣಿಸುತ್ತಿದೆ. ಇದು ಒಂದುಕಾಲದ ಪರಿಸ್ಥಿತಿಯಲ್ಲ ಇಂದಿಗೂ ಹಾಗೆಯೇ ನಡೆಯುತ್ತಿದೆ. ಈದಿನ ಇಂಟರ್‌ನೆಟನ್ನು ಉಪಯೋಗಿಸಿಕೊಂಡು ಮುಸ್ಲಿಮ್ ಉಗ್ರವಾದಿಗಳು ಅನೇಕ ವಿಧಗಳಾಗಿ ಅವರ ಬಲವನ್ನು ಬೆಳೆಸಿಕೊಳ್ಳುತ್ತಿದ್ದಾರೆಂದು ವಾರ್ತೆಗಳಲ್ಲಿ ಕೇಳುತ್ತಿದ್ದೇವೆ. ಮುಸ್ಲಿಮ್‌ರು ಮಾಡುವಕೆಲಸವೇ ಎಲ್ಲರಿಗೂ ಕಾಣಿಸುತ್ತಿದೆ ಆದರೇ, ಉಳಿದ ಮತದವರು ಮಾಡುವ ಉಗ್ರವಾದವು ತೆರೆಯಮರೆಯಲ್ಲಿ ಕಾಣಿಸುತ್ತಿಲ್ಲ. ಎಲ್ಲ ಮತದವರು ಯಾರಿಗೆ ಕೈಲಾದಷ್ಟು ಅವರು ಮಾಡುತ್ತಲೇ ಇದ್ದಾರೆ. ತೆರೆಮರೆಯಲ್ಲಿ ಉಗ್ರವಾದವನ್ನು ಕ್ರೈಸ್ತರು ಕುತಂತ್ರದಿಂದ ಮಾಡುತ್ತಿದ್ದಾರೆ. ಅದನ್ನು ತಿಳಿಯದ ಹಿಂದೂಗಳು ಅವರಲ್ಲಿನ ಮತದ್ವೇಷವನ್ನು ಸ್ವಮತದ ಮೇಲೆಯೇ ತೋರಿಸುತ್ತಿದ್ದಾರೆ. ಇಂದಿಗೂ ಅದೇ ನಡೆಯುತ್ತಿದೆ. ನಾವು ಬರೆದಿರುವುದು ಸತ್ಯವೆಂದು ಗ್ರಹಿಸದ ಹಿಂದೂಗಳು, ಇಂದಿಗೂ ನಮ್ಮನ್ನು

ಪರಮತ ಪ್ರಚಾರಕರಾಗಿಯೇ ಭಾವಿಸುತ್ತಿದ್ದಾರೆ. ಇವರ ಬುದ್ಧಿ ಏನಾಗಿದೆಯೋ ಆದರೆ ಹೇಳಿದರೂ ಕಣ್ಣು ತೆರೆದು ನೋಡಲಾರದ ಸ್ಥಿತಿಯಲ್ಲಿದ್ದಾರೆ. ಅದರಿಂದ ಕ್ರೈಸ್ತರು ತಮ್ಮ ಕೆಲಸವನ್ನು ಸುಲಭವಾಗಿ ಮಾಡಿಕೊಳ್ಳುತ್ತಿದ್ದಾರೆ. ತಮ್ಮ ಮತವನ್ನು ಸುಲಭವಾಗಿ ಬೆಳೆಸಿಕೊಳ್ಳುತ್ತಿದ್ದಾರೆ.

ಎಷ್ಟೋಜನ ಹಿಂದೂಗಳು ಮತರಕ್ಷಣೆ ಗುಂಪುಗಳಾಗಿ, ಸಂಘಗಳಾಗಿ ಏರ್ಪಟ್ಟು ಎಷ್ಟು ಗಂಟಲುಕಿತ್ತುಕೊಂಡರೂ, ಏನು ಮಾಡುತ್ತಿದ್ದರೂ ಪರಮತಗಳು ಏಕೆ ಬೆಳೆದುಹೋಗುತ್ತಿವೆ? ಸ್ವಮತ ಏಕೆ ಕ್ಷೀಣಿಸಿ ಹೋಗುತ್ತಿದೆಯೆಂದು? ಗ್ರಹಿಸಲಾರದೆ ಹೋಗುತ್ತಿದ್ದಾರೆ. ಈ ಮಧ್ಯಕಾಲದಲ್ಲಿ ನಡೆದ ಒಂದು ವಿಷಯವನ್ನು ಹೇಳುವೆನು ಕೇಳಿ. ಅದರೊಂದಿಗೆ ಕ್ರೈಸ್ತರು ಎಷ್ಟು ಕುತಂತ್ರದಾರರೋ ಹಿಂದೂಗಳು ಎಷ್ಟು ದಡ್ಡರಾಗಿ ಪ್ರವರ್ತಿಸುತ್ತಿದ್ದಾರೋ ತಿಳಿಯಬಲ್ಲದು. ಕ್ರೈಸ್ತವ ಕುತಂತ್ರದಾರರು ತಾವು ಹಿಂದೂಗಳಾಗಿ ಕಾಣಿಸುತ್ತಾ, ಹಿಂದೂನಾಯಕರೊಂದಿಗೆ ಸಂಬಂಧಗಳು ಏರ್ಪಡಿಸಿಕೊಂಡು, ನಾವು ಕ್ರೈಸ್ತ ಮತವನ್ನು ಕುರಿತು ಪ್ರಚಾರ ಮಾಡುತ್ತಿದ್ದೇವೆ ಯೆಂದು, ರಾಮನು ದೇವರಲ್ಲವೆಂದು ಅನ್ನುತ್ತಿದ್ದೇವೆಂದು ಹೇಳಿದರೆ, ಅವರ ಮಾತುಗಳನ್ನು ನಂಬಿದ ಹಿಂದೂಗಳು ನಮ್ಮ ಗ್ರಂಥಗಳಲ್ಲಿ ಏನಿದೆಯೆಂದು ನೋಡದೇ, ಸ್ವಲ್ಪವಾದರೂ ಓದದೇ, ನಮ್ಮನ್ನು ಇಂಟರ್‌ನೆಟ್ 'ಫೇಸ್‌ಬುಕ್'ನಲ್ಲಿ ಎಷ್ಟೋ ಪೋಸ್ಟುಗಳನ್ನಿಟ್ಟು, ನಾನಾ ವಿಧಗಳಾಗಿ ದೂಷಿಸುವುದು ನಡೆದಿದೆ. ನಮ್ಮ ಗ್ರಂಥಗಳನ್ನು ಓದಿರೆಂದು ನಮ್ಮ ಶಿಷ್ಯರು ಹೇಳಿದರೂ ಕೇಳಿಸಿಕೊಳ್ಳದೇ, ನಿಜವೆಷ್ಟು ಸುಳ್ಳೆಷ್ಟು ಎಂದು ನೋಡದೇ, ಎಷ್ಟೋಜನ ಹಿಂದೂಗಳು ನಮ್ಮನ್ನು ನಿಂದಿಸುವುದು ನಡೆದಿದೆ. ಇದೆಲ್ಲಾ ಹಿಂದೆ ಕಾಣಿಸದೇ ಕ್ರೈಸ್ತರು ಹಿಂದೂಗಳನ್ನು ಉದ್ರೇಕಗೊಳಿಸುತ್ತಿದ್ದಾರೆಂದು ನಮಗೆ ತಿಳಿದಿದೆ. ಈ ವಿಧವಾಗಿ ಹಿಂದೂಗಳ ಬೆರಳಿನಿಂದ ಹಿಂದೂಗಳ ಕಣ್ಣನ್ನೇ ಚುಚ್ಚಬೇಕೆಂದು ಕೆಲವರು ಇತರ ಮತದವರು ನೋಡುತ್ತಿದ್ದಾರೆ. ಅದೇ ಕೆಲಸವನ್ನು ಮಾಡುತ್ತಿದ್ದಾರೆ. ಹೀಗೆ ಪ್ರತಿ ಮತದಲ್ಲಿಯೂ ಪರಮತದ್ವೇಷವಿದ್ದೇಇದೆ. ಪರಮತ ದ್ವೇಷ, ಸ್ವಮತ ಅಭಿಮಾನ ಇಲ್ಲದ ಮತವೇ ಇಲ್ಲ.

ಇಂದಿನಕಾಲದಲ್ಲಿ ನಾವು ನಿಜವಾದ ದೇವರ ಬೋಧನೆಯನ್ನು ತಿಳಿಸುತ್ತಾ, ಎಲ್ಲ ಮತಗಳಲ್ಲಿನ ಜ್ಞಾನವು ಒಂದೇ ಎಂದು, ಮೂರು ಮತದವರಿಗು ತಿಳಿಸುತ್ತೇವೆ. ಹಿಂದೂಮತದಲ್ಲಿ ಕುಲಹುಚ್ಚು ಇಲ್ಲದಂತೆ ಎಲ್ಲಾ ಸಮಾನವಾಗಿ ಇರುವಂತೆ ಬ್ರಾಹ್ಮಣ, ವೈಶ್ಯ, ಶೂದ್ರ ಕುಲದವರಿಗೆ ಒಂದೇ ಜ್ಞಾನವನ್ನು ಹೇಳುತ್ತಾ, ಕುಲರಹಿತವಾಗಿ ಇರುವಂತೆ ನಮ್ಮ ಮಾರ್ಗದರ್ಶನದಲ್ಲಿ **'ದ್ರಾವೀಡ ಬ್ರಾಹ್ಮಣ', 'ದ್ರಾವೀಡಶ್ರೇಷ್ಠಿ', 'ಪ್ರಬೋಧ ಸೇವಾಸಮಿತಿ'** ಎಂಬ ಮೂರು ಕುಲ ಸಂಘಗಳನ್ನು ಏರ್ಪಡಿಸಿದ್ದೇವೆ. ಅದೇ ವಿಧವಾಗಿ ಮೂರುಮತದವರು ಸಮಾನವಾಗಿ ನಮ್ಮ ಬೋಧನೆಗಳು ಕೇಳುತ್ತಿದ್ದಾರೆಂದು ತಿಳಿಯುವಂತೆ, ನಮ್ಮ ಮಾರ್ಗದರ್ಶನದಲ್ಲಿ ಮೂರು ಮತಗಳ ಸಂಘಗಳನ್ನು ಏರ್ಪಾಟು ಮಾಡಿದ್ದೇವೆ. **ಒಂದು 'ಇಂದೂ ಜ್ಞಾನವೇದಿಕೆ', ಎರಡನೆಯದು 'ಸುವಾರ್ತೆ ಬೈಬಲ್ ಸಂಘ', ಮೂರನೆಯದು 'ಖುದಾ ಇಸ್ಲಾಮಿಕ್ ಸ್ಪಿರಿಚ್ಯುವೆಲ್ ಸೊಸೈಟೀ'**. ಮೂರು ಕುಲ, ಮೂರು ಮತ ಸಂಘಗಳು ನಮ್ಮ ಸಮಕ್ಷದಲ್ಲಿ ಒಂದೇ ದಾರಿಯಲ್ಲಿ, ಒಂದೇ ಜ್ಞಾನದ ಮೇಲೆ ನಡೆಯುತ್ತಿವೆ. ಎಷ್ಟೋಜನ ಮೂರು ಮತದವರು ನಮ್ಮ ಬಳಿ **"ಒಂದೇ ದೇವರು, ಒಂದೇ ಜ್ಞಾನ"** ಎಂಬ ಸೂತ್ರದ ಮೇಲಿದ್ದಾರೆ. ಉಳಿದ ಪುಟಗಳಲ್ಲಿ ನಮ್ಮ ಮಾರ್ಗದರ್ಶನದಲ್ಲಿನ ಸಂಘಗಳನ್ನು ನೋಡಬಹುದು. ಇದನ್ನು ನೋಡಿಯಾದರೂ ಈಕ್ಷಣದಿಂದ ಮತದ್ವೇಷಗಳನ್ನು ಬಿಟ್ಟು ಎಲ್ಲರೂ ಐಕಮತ್ಯವಾಗಿ ಬದುಕಬೇಕೆಂದು ತಿಳಿಸುತ್ತಿದ್ದೇವೆ.

# ಸಮಾಪ್ತ

********

**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರವು ಎಷ್ಟು ಅಗತ್ಯವೋ, ಹಾಗೆಯೇ ಒಂದು ವಿಷಯವನ್ನು ಖಂಡಿಸುವುದಕ್ಕೆ ಶಾಸ್ತ್ರವು ಅಷ್ಟೇ ಅಗತ್ಯವಾಗುವುದು.**

********

**ಅಸತ್ಯವನ್ನು ಸಾವಿರಜನ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರಜನ ಅಲ್ಲವೆಂದರೂ ಅದು ಅಸತ್ಯವಲ್ಲ.**

**1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ, ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.**

**2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.**

**3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.**

**4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.**

**5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.**

**6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.**

**ಮತಗಳು ನಿಷೇಧ, ನಿಷಿದ್ಧ. ಕುಲಗಳು ಅಹೇತುಕ, ಅಶಾಸ್ತ್ರೀಯ.**

**ಭಗವದ್ಗೀತಾ, ಬೈಬಲ್, ಖುರಾನ್ ಮೂರೂ ಒಂದೇ ದೈವಗ್ರಂಥಗಳಲ್ಲಿನ ಭಾಗಗಳೇ.**

**ನಿಮ್ಮ ಮನೋಭಾವನೆಗಳು ಕುಲಮತಗಳಿಗೆ ಅತೀತವಾದರೇ ಕೂಡಲೇ "ಪ್ರಬೋಧ ಸೇವಾಸಮಿತಿ" ಯಲ್ಲಿ ಸದಸ್ಯರಾಗಿ ಸೇರಿರಿ. ದೇವರು ನಿಮ್ಮನ್ನು ಜ್ಞಾನಿಗಳಾಗಿ ಮಾಡಬೇಕೆಂದು ಕೋರುತ್ತಿರುವ**

**--ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

**Cell:09705864675, 09440556968, 09611133635**

# ಯಾವ ಮತದಲ್ಲಿ ಎಷ್ಟು ಮತದ್ವೇಷ

ಪ್ರಮುಖರ ಲೇಖೆ

Sakshi News Paper : 21-01-2014



## ಇಂದೂ ದೇಶವೇ ಇಂಡಿಯಾ!

**ಹಿ**ಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆದಿನದ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮ ವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನೆಯಿಂದ